KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೬, ೨೦೦೬ (ಕಾರ್ತಿಕ ೪, ಶಕ ವರ್ಷ ೧೯೨೮) | ಸಂಚಿಕೆ ೪೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು**

**ಸಂಖ್ಯೆ:Comp:9:03-04, ಬೆಂಗಳೂರು, ದಿನಾಂಕ:25ನೇ ಸೆಪ್ಟೆಂಬರ್, 2006**

**ಗಣಕೀಕರಣ**

**ಸುತ್ತೋಲೆ ಸಂಖ್ಯೆ 13**

**ವಿಷಯ:** ಕಾವೇರಿ ಸಾಫ್ಟ್‌ವೇರ್‌ನಲ್ಲಿ ದಸ್ತಾವೇಜುಗಳನ್ನು ನೊಂದಾಯಿಸಿದ ನಂತರ ಸ್ಕ್ಯಾನ್ ಮಾಡಿದ ಛಾಯಾ ಪ್ರತಿಗಳನ್ನು ಕಡ್ಡಾಯವಾಗಿ ಪರಿಶೀಲನೆ ಮಾಡುವ ಕುರಿತು.

ಕಾವೇರಿ ಸಾಫ್ಟ್‌ವೇರ್‌ದಲ್ಲಿ, ನೋಂದಾದ ದಸ್ತಾವೇಜುಗಳನ್ನು ನಾಲ್ಕು ಪ್ರತಿ ಸಿ.ಡಿ.ಗಳಲ್ಲಿ ಸಂಗ್ರಹಿಸಲಾಗುತ್ತಿದೆ. ಹೀಗೆ ಸಂಗ್ರಹಿಸಲಾಗುವ ಸಿ.ಡಿ. ಗಳಲ್ಲಿ ಕೆಲವು ದಸ್ತಾವೇಜುಗಳ ಛಾಯಾ ಪ್ರತಿಗಳು ಕಂಡು ಬರುತ್ತಿಲ್ಲವೆಂದು ತಿಳಿದು ಬಂದಿರುತ್ತದೆ. ನೋಂದಾಯಿಸಲ್ಪಟ್ಟ ಸಾರ್ವಜನಿಕರ ದಸ್ತಾವೇಜುಗಳ ಯಾವುದೇ ಮಾಹಿತಿ ತಪ್ಪಿಹೋಗದಂತೆ ಸಿ.ಡಿ.ಗಳಲ್ಲಿ ಸಂಗ್ರಹಿಸಿಟ್ಟು ಸಾರ್ವಜನಿಕರು ಕೇಳಿದಾಗ ಅದರ ಪ್ರತಿಗಳನ್ನು ದೃಢೀಕರಿಸಿ ನೀಡುವುದು ಇಲಾಖೆಯ ಜವಾಬ್ದಾರಿಯಾಗಿದ್ದು, ಇದೊಂದು ಬಹುಮುಖ್ಯ ಕರ್ತವ್ಯವಾಗಿರುತ್ತದೆ. ಆದ್ದರಿಂದ ಪ್ರತಿಯೊಂದು ಸಿ.ಡಿ.ಯನ್ನು ಯಾವುದೇ ದಸ್ತಾವೇಜು ಅಥವಾ ಯಾವುದೇ ಪುಟವು ಸ್ಕ್ಯಾನ್ ಆಗದೇ ಬಿಟ್ಟುಹೋಗಿಲ್ಲ ಎಂಬ ಬಗ್ಗೆ ದೃಢೀಪಡಿಸಿಕೊಳ್ಳುವುದು ಅವಶ್ಯವಿರುತ್ತದೆ.

ಕಾವೇರಿ ಗಣಕ ಯಂತ್ರಗಳಿಂದ ದಸ್ತಾವೇಜುಗಳನ್ನು ನೋಂದಾಯಿಸಿದ ನಂತರ ದಸ್ತಾವೇಜಿನ ಎಲ್ಲಾ ಪುಟಗಳನ್ನು ಸ್ಕ್ಯಾನ್ ಮಾಡುವುದು ಉಪ ನೋಂದಣಾಧಿಕಾರಿಯವರ ಮುಖ್ಯ ಕರ್ತವ್ಯ ಹಾಗೂ ಜವಾಬ್ದಾರಿಯಾಗಿರುತ್ತದೆ. ಈ ಕಾರ್ಯಕ್ಕಾಗಿ ಕಛೇರಿಯ ದ್ವಿತೀಯ ದರ್ಜೆ ಸಹಾಯಕ/ ಪ್ರಥಮ ದರ್ಜೆ ಸಹಾಯಕರವರನ್ನು ಈ ಕಾರ್ಯ ನಿರ್ವಹಿಸಲು ಉಪ ನೋಂದಣಾಧಿಕಾರಿಗಳು ಕಛೇರಿ ಆದೇಶ ಹೊರಡಿಸತಕ್ಕದ್ದು. ದಸ್ತಾವೇಜನ್ನು ನೋಂದಾಯಿಸಿ ಪಕ್ಷಕಾರರುಗಳಿಗೆ ಹಿಂದಿರುಗಿಸುವ ಪೂರ್ವದಲ್ಲಿ ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪುಟಗಳ ಪರಿಶೀಲನಾ ಕಾರ್ಯ ಕೈಗೊಳ್ಳಬೇಕಾಗಿರುತ್ತದೆ. ದಸ್ತಾವೇಜನ್ನು ಕಂಪ್ಯೂಟರ್ ಆಪರೇಟ್‌ಗಳು ಸ್ಕ್ಯಾನ್ ಮಾಡಿದ ನಂತರ ದ್ವಿತೀಯ ದರ್ಜೆ ಸಹಾಯಕ/ ಪ್ರಥಮ ದರ್ಜೆ ಸಹಾಯಕರವರು ದಸ್ತಾವೇಜು ಪುಟಗಳೊಂದಿಗೆ ಸ್ಕ್ಯಾನ್ ಮಾಡಿದ ಪುಟಗಳನ್ನು ಪರಿಶೀಲಿಸಿ ತಾಳೆ ಮಾಡುವುದು ಅತ್ಯವಶ್ಯವಿರುತ್ತದೆ. ದಸ್ತಾವೇಜಿನ ಯಾವುದೇ ಪುಟವು ಸ್ಕ್ಯಾನ್ ಆಗಿಲ್ಲದಿದ್ದಲ್ಲಿ ಆ ಕ್ಷಣದಲ್ಲಿಯೇ Save ಆಗುವ ಮೊದಲೇ ಅದನ್ನು ಸ್ಕ್ಯಾನ್ ಮಾಡಬೇಕಾಗಿರುತ್ತದೆ. ಹೀಗೆ ಸ್ಕ್ಯಾನ್ ಮಾಡಿದ ಬಗ್ಗೆ ಪರಿಶೀಲನೆ ಕೈಗೊಂಡು ದಸ್ತಾವೇಜಿನ ಎಲ್ಲಾ ಪುಟಗಳು ಸ್ಕ್ಯಾನ್ ಮಾಡಲ್ಪಟ್ಟಿವೆ ಎಂಬ ಬಗ್ಗೆ ದ್ವಿತೀಯ ದರ್ಜೆ ಸಹಾಯಕ/ ಪ್ರಥಮ ದರ್ಜೆ ಸಹಾಯಕ ಹಾಗೂ ಉಪ ನೋಂದಣಾಧಿಕಾರಿಯವರು, ಪಕ್ಷಕಾರರು ದಸ್ತವೇಜನ್ನು ಪಡೆದುಕೊಂಡ ಬಗ್ಗೆ ನೀಡುವ 'ಸ್ವೀಕೃತಿಯಲ್ಲಿ' ದೃಢೀಕರಿಸಬೇಕಾಗಿರುತ್ತದೆ. ತದನಂತರ ದಸ್ತಾವೇಜನ್ನು ಸಂಬಂಧಪಟ್ಟ ಪಕ್ಷಕಾರರುಗಳಿಗೆ ಹಿಂದಿರುಗಿಸಬೇಕಾಗಿರುತ್ತದೆ. ಯಾವುದೇ ದಸ್ತಾವೇಜು/ ಪುಟವು ಸ್ಕ್ಯಾನ್ ಆಗದೆ ಬಿಟ್ಟು ಹೋಗಿರುವುದು ಕಂಡುಬಂದಲ್ಲಿ ಅಂತಹ ಸಿಬ್ಬಂದಿ/ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮವನ್ನು ಜಾರಿಗೊಳಿಸಲಾಗುವುದು.

ಮೇಲ್ಕಂಡಂತೆ ಪರಿಶೀಲನೆಗೊಳಪಟ್ಟ ಸ್ಕ್ಯಾನ್ ಮಾಡಿದ ದಸ್ತಾವೇಜುಗಳನ್ನು 4 ಸೆಟ್ ಸಿ.ಡಿ.ಗಳಲ್ಲಿ ಸಂಗ್ರಹಿಸಿಡಬೇಕಾಗಿರುತ್ತದೆ. ಇಂತಹ ಸಿ.ಡಿ.ಗಳ ಎರಡು ಸೆಟ್‌ಗಳನ್ನು ಉಪ ನೋಂದಣಾಧಿಕಾರಿರವರು ಆಯಾ ಜಿಲ್ಲೆಯ ಜಿಲ್ಲಾ ನೋಂದಣಾಧಿಕಾರಿಗಳಿಗೆ ಪ್ರತಿ ತಿಂಗಳಿನ 5ನೇ ತಾರೀಖಿನೊಳಗಾಗಿ ಇದರೊಂದಿಗೆ ಲಗತ್ತಿಸಿರುವ ನಮೂನೆ-I ರ ವರದಿಯೊಂದಿಗೆ (ವರದಿ ದ್ವಿಪ್ರತಿಯಲ್ಲಿ) ಖುದ್ದಾಗಿ ಸಲ್ಲಿಸಬೇಕು. ನಮೂನೆ-Iರ

ವರದಿಯ ಒಂದು ಪ್ರತಿಯನ್ನು ಹಾಗೂ ನಮೂನೆ-II ರ ಕ್ರೋಢೀಕೃತ ವರದಿಯೊಂದಿಗೆ ಸಿ.ಡಿ.ಗಳ ಒಂದೊಂದು ಸೆಟ್‌ಗಳನ್ನು ಜಿಲ್ಲಾ ನೋಂದಣಾಧಿಕಾರಿಯವರು ಪ್ರತಿ ತಿಂಗಳಿನ 10ನೇ ತಾರೀಖಿನೊಳಗಾಗಿ ಕೇಂದ್ರ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿಯನ್ನು ಪಡೆದುಕೊಳ್ಳಬೇಕು.

ಸಿ.ಡಿ.ಗಳನ್ನು ಉಪ ನೋಂದಣಾಧಿಕಾರಿರವರು ಜಿಲ್ಲಾ ನೋಂದಣಾಧಿಕಾರಿರವರಿಗೆ ಹಾಗೂ ಜಿಲ್ಲಾ ನೋಂದಣಾಧಿಕಾರಿರವರು ಕೇಂದ್ರ ಕಛೇರಿಗೆ ಕಳುಹಿಸುವ ಪೂರ್ವದಲ್ಲಿ ಕಾವೇರಿ ಗಣಕ ಯಂತ್ರಗಳಲ್ಲಿ ಪರಿಶೀಲಿಸಿ ಎಲ್ಲಾ ದಸ್ತಾವೇಜುಗಳ ಎಲ್ಲಾ ಪುಟಗಳು ಕ್ರಮಬದ್ಧವಾಗಿ ಸ್ಕ್ಯಾನ್ ಮಾಡಲ್ಪಟ್ಟಿವೆ ಎಂಬ ಬಗ್ಗೆ ಪರಿಶೀಲಿಸಬೇಕು ಹಾಗೂ ಆ ಕುರಿತಂತೆ ದೃಢೀಕರಣವನ್ನು ನಮೂನೆ-I ಹಾಗೂ II ರಲ್ಲಿ ಕಡ್ಡಾಯವಾಗಿ ದಾಖಲಿಸಿ ಸಹಿ ಮಾಡಿ ರಬ್ಬರ್ ಮುದ್ರೆ ಹಾಕಬೇಕು.

ಯಾವುದೇ ತಿಂಗಳಿನಲ್ಲಿ ಸಿ.ಡಿ. ಕಟ್ ಮಾಡಿರದಿದ್ದಲ್ಲಿ ಮೇಲ್ಕಂಡ ನಮೂನೆಗಳಲ್ಲಿ ಆಯಾ ತಿಂಗಳುಗಳಿಗೆ ಸಂಬಂಧಿಸಿದಂತೆ 'ನಿಲ್' ವರದಿ ದಾಖಲಿಸಿ ಕಳಿಸತಕ್ಕದ್ದು.

ಈ ಸುತ್ತೋಲೆಯ ಪ್ರತಿಯು ತಲುಪಿದ ಬಗ್ಗೆ ಸ್ವೀಕೃತಿಯನ್ನು ತಪ್ಪದೇ ಕಳಿಸಲು ಸೂಚಿಸಿದೆ.

**ಸಿ. ಕೃಷ್ಣಪ್ಪ**
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ಅನುಬಂಧ-I

### ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು

### ಜಿಲ್ಲಾ ನೋಂದಣಾಧಿಕಾರಿಗಳಿಗೆ.................ತಿಂಗಳ ಅಂತ್ಯಕ್ಕೆ ಕಳುಹಿಸಿದ ಸಿ.ಡಿ.ಗಳ ವಿವರ

ಉಪ ನೋಂದಣಿ ಕಛೇರಿ ಹೆಸರು: ತಿಂಗಳು: ವರ್ಷ:

| ಕ್ರ. ಸಂ. | ಸಿ.ಡಿ. ಸಂಖ್ಯೆ | ಬುಕ್-I ದಸ್ತಾವೇಜು ಸಂಖ್ಯೆ | | ಬುಕ್-III ದಸ್ತಾವೇಜು ಸಂಖ್ಯೆ | | ಬುಕ್-IV ದಸ್ತಾವೇಜು ಸಂಖ್ಯೆ | | ಬುಕ್-I ಭಾಗ-IV ದಸ್ತಾವೇಜು ಸಂಖ್ಯೆ | | ಬುಕ್-I ಭಾಗ-V ದಸ್ತಾವೇಜು ಸಂಖ್ಯೆ | | ಷರಾ |
|---|---|---|---|---|---|---|---|---|---|---|---|---|
| | | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| | | | | | | | | | | | | |
| | | | | | | | | | | | | |
| | | | | | | | | | | | | |

**ಘೋಷ್ವಾರೆ**

| ಕಛೇರಿಯು ಗಣಕೀಕರಣಗೊಂಡ ನಂತರದಿಂದ ಹಿಂದಿನ ತಿಂಗಳವರೆಗೆ ಕಳುಹಿಸಿದ ಒಟ್ಟು ಸಿ.ಡಿ.ಗಳ ಸಂಖ್ಯೆ | ಪ್ರಸ್ತುತ ತಿಂಗಳು ಕಳುಹಿಸಿದ ಸಿ.ಡಿ.ಗಳ ಸಂಖ್ಯೆ | ಒಟ್ಟು ಸಿ.ಡಿ.ಗಳ ಸಂಖ್ಯೆ |
|---|---|---|
| | | |

**"ದೃಢೀಕರಣ"**

"ಈ ಮೇಲೆ ನಮೂದಿಸಿದ ಸಿ.ಡಿ.ಗಳಲ್ಲಿ ಸಂಗ್ರಹಿಸಿರುವ ದಸ್ತಾವೇಜುಗಳ ಛಾಯಾ ಪ್ರತಿಗಳೆಲ್ಲವನ್ನು ಕಾವೇರಿ ತಂತ್ರಾಂಶದ ಕಂಪ್ಯೂಟರ್‌ನಲ್ಲಿ ಪರಿಶೀಲಿಸಲಾಗಿದ್ದು ಎಲ್ಲಾ ದಸ್ತಾವೇಜುಗಳ ಎಲ್ಲಾ ಪುಟಗಳು ಕ್ರಮಬದ್ಧವಾಗಿ ಸ್ಕ್ಯಾನ್ ಆಗಿರುತ್ತವೆ ಹಾಗೂ ಅವುಗಳನ್ನು ನಾವು ಖುದ್ದಾಗಿ ಓದಿ ನೋಡಿ ಪರಿಶೀಲಿಸಿದ್ದೇವೆ ಎಂದು ಈ ಮೂಲಕ ದೃಢೀಕರಿಸಲಾಗಿದೆ."

ಸ್ಥಳ:................ ಸಹಿ.......................... ಸಹಿ.....................
ದಿನಾಂಕ:................ (ಹೆಸರು......................) (ಹೆಸರು....................)
ಪ್ರ.ದ.ಸ./ ದ್ವಿ.ದ.ಸ. ಉಪ ನೋಂದಣಿ ಅಧಿಕಾರಿ
(ರಬ್ಬರ್ ಮೊಹರು)

## ಅನುಬಂಧ-II

### ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು

### ಇವರಿಗೆ.................ತಿಂಗಳ ಅಂತ್ಯಕ್ಕೆ ಕಳುಹಿಸಿದ ಸಿ.ಡಿ.ಗಳ ವಿವರ

ಉಪ ನೋಂದಣಿ ಕಛೇರಿ ಹೆಸರು: ತಿಂಗಳು: ವರ್ಷ:

| ಕ್ರ. ಸಂ. | ಉಪ ನೋಂದಣಿ ಕಛೇರಿ ಹೆಸರು | ಸಿ.ಡಿ. ಸಂಖ್ಯೆ | ಬುಕ್-I ದಸ್ತಾವೇಜು ಸಂಖ್ಯೆ | | ಬುಕ್-III ದಸ್ತಾವೇಜು ಸಂಖ್ಯೆ | | ಬುಕ್-IV ದಸ್ತಾವೇಜು ಸಂಖ್ಯೆ | | ಬುಕ್-I ಭಾಗ-IV ದಸ್ತಾವೇಜು ಸಂಖ್ಯೆ | | ಬುಕ್-I ಭಾಗ-V ದಸ್ತಾವೇಜು ಸಂಖ್ಯೆ | | ಷರಾ |
|---|---|---|---|---|---|---|---|---|---|---|---|---|---|
| | | | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| | | | | | | | | | | | | | |
| | | | | | | | | | | | | | |
| | | | | | | | | | | | | | |

**ಘೋಷ್ವಾರೆ**

| ಕಛೇರಿಯು ಗಣಕೀಕರಣಗೊಂಡ ನಂತರದಿಂದ ಹಿಂದಿನ ತಿಂಗಳವರೆಗೆ ಕಳುಹಿಸಿದ ಒಟ್ಟು ಸಿ.ಡಿ.ಗಳ ಸಂಖ್ಯೆ | ಪ್ರಸ್ತುತ ತಿಂಗಳು ಕಳುಹಿಸಿದ ಸಿ.ಡಿ.ಗಳ ಸಂಖ್ಯೆ | ಒಟ್ಟು ಸಿ.ಡಿ.ಗಳ ಸಂಖ್ಯೆ |
|---|---|---|
| | | |

**"ದೃಢೀಕರಣ"**

"ಈ ಮೇಲೆ ನಮೂದಿಸಿದ ಸಿ.ಡಿ.ಗಳಲ್ಲಿ ಸಂಗ್ರಹಿಸಿರುವ ದಸ್ತಾವೇಜುಗಳ ಛಾಯಾ ಪ್ರತಿಗಳೆಲ್ಲವನ್ನು ಕಾವೇರಿ ತಂತ್ರಾಂಶದ ಕಂಪ್ಯೂಟರ್‌ನಲ್ಲಿ ಪರಿಶೀಲಿಸಲಾಗಿದ್ದು ಎಲ್ಲಾ ದಸ್ತಾವೇಜುಗಳ ಎಲ್ಲಾ ಪುಟಗಳು ಕ್ರಮಬದ್ಧವಾಗಿ ಸ್ಕ್ಯಾನ್ ಆಗಿರುತ್ತವೆ ಹಾಗೂ ಅವುಗಳನ್ನು ನಾವು ಖುದ್ದಾಗಿ ಓದಿ ನೋಡಿ ಪರಿಶೀಲಿಸಿದ್ದೇವೆ ಎಂದು ಈ ಮೂಲಕ ದೃಢೀಕರಿಸಲಾಗಿದೆ."

ಸ್ಥಳ:................ ಸಹಿ.......................... ಸಹಿ.....................
ದಿನಾಂಕ:................ (ಹೆಸರು......................) (ಹೆಸರು....................)
ಪ್ರ.ದ.ಸ./ ದ್ವಿ.ದ.ಸ. ಉಪ ನೋಂದಣಿ ಅಧಿಕಾರಿ
(ರಬ್ಬರ್ ಮೊಹರು)

**ಸಿ. ಕೃಷ್ಣಪ್ಪ**
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್.1527

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ-3, ಕರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029**

**ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ/ ಸಿಆರ್-98/ 2006, ದಿನಾಂಕ:20ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

ಶ್ರೀಮತಿ ಬಸಮ್ಮ ಕೋಂ ಲೇಟ್ ಪಾಪಣ್ಣ, ಮಲ್ಲೇಶ್‌ಪಾಳ್ಯ, ಜಲಕಂಠೇಶ್ವರ ಮುಖ್ಯರಸ್ತೆ, ನ್ಯೂ ತಿಪ್ಪಸಂದ್ರ, ಬೆಂಗಳೂರು-75.

**ವಿರುದ್ಧ**

**ಪ್ರತಿವಾದಿಗಳು:**

1) ಎಂ. ನಾರಾಯಣಸ್ವಾಮಿ, ಬಿನ್ ಲೇಟ್ ಮುನಿಯಪ್ಪ, ನಂ.19, ತುಬರಹಳ್ಳಿ, ವರ್ತೂರು ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು.
2) ಟಾಟಾ ಎಐಜಿ ಜನರಲ್ ಇನ್ಸೂರೆನ್ಸ್ ಕಂ.ಲಿ., ಖನಿಜ ಭವನ, 5ನೇ ಮಹಡಿ ನಂ.49, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು-1.

ಶ್ರೀಮತಿ ಬಸಮ್ಮ ಕೋಂ ಲೇಟ್: ಪಾಪಣ್ಣ ಇವರು ಮೃತ ನಾಗರಾಜನ ವಾರಸುದಾರರೆಂದು ಹೇಳಿ ಪರಿಹಾರ ಪಡೆಯುವ ಸಲುವಾಗಿ ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ಅನ್ವಯ ಈ ಕಛೇರಿಯಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎಸ್.ಎಸ್. ಷರೀಫ್**
ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ವಿಭಾಗ-3, ಬೆಂಗಳೂರು.

ಪಿ.ಆರ್.1457

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ-3, ಕರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029**

**ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ/ ಸಿಆರ್-99/ 2006, ದಿನಾಂಕ:20ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಶ್ರೀ ಅಬ್ಬಯ್ಯಪ್ಪ ಬಿನ್ ಲೇ: ಗಂಗಾಧರಯ್ಯ.
2) ಶ್ರೀಮತಿ ವೆಂಕಟಮ್ಮ ಕೋಂ ಅಬ್ಬಯ್ಯಪ್ಪ ಕೋತೂರು ಗ್ರಾಮ, ಅನುಗೊಂಡನಹಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಜಿಲ್ಲೆ.

**ಪ್ರತಿವಾದಿಗಳು:**

1) ಹೆಚ್.ಎಸ್. ಪ್ರಕಾಶ್, ನಂ.14, ಮದುರನಗರ, 1ನೇ ಸ್ಟೇಜ್, ಸೋರಹುಣಸೆ ಬಡಾವಣೆ, ಬೆಂಗಳೂರು-87.
2) ದಿ ಒರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಡಿ.ಓ.ನಂ.8, ನಂ.22, ಡಿವಿಜಿ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು-4.

ಅಬ್ಬಯ್ಯಪ್ಪ ಹಾಗೂ ವೆಂಕಟಮ್ಮ ಇವರುಗಳು ಮೃತ ನಾರಾಯಣಸ್ವಾಮಿ ಅಲಿಯಾಸ್ ನಾರಾಯಣಪ್ಪನ ತಂದೆ ತಾಯಿಗಳೆಂದು ಹೇಳಿ ಪರಿಹಾರ ಪಡೆಯುವ ಸಲುವಾಗಿ ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ಅನ್ವಯ ಈ ಕಛೇರಿಯಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ

ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎಸ್.ಎಸ್. ಷರೀಫ್**
ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ವಿಭಾಗ-3, ಬೆಂಗಳೂರು.

ಪಿ.ಆರ್.1458

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು, ವಿಭಾಗ-3, ಕರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560029**

**ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ/ ಸಿಆರ್-100/ 2006, ದಿನಾಂಕ:22ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಜಿ.ಎಂ. ಚನ್ನಕೃಷ್ಣಪ್ಪ.
2) ಲಕ್ಷ್ಮಮ್ಮ ದೊಡ್ಡಗಂಜೂರು ಗ್ರಾಮ/ ಅಂಚೆ, ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀಮತಿ ಚಿಕ್ಕಮ್ಮಯ್ಯ, ಕೋಂ ಲೇಟ್ ಮುನಿಬೈಚಪ್ಪ, ಡೈಮಂಡ್ ಟಾಕೀಸ್ ರಸ್ತೆ, ಚಿಂತಾಮಣಿ, ಕೋಲಾರ ಜಿಲ್ಲೆ.
2) ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಎಸ್.ಬಿ.ಎಲ್.ಟಿ. ಬಿಲ್ಡಿಂಗ್ ಪಾಲಿಟೆಕ್ನಿಕ್ ರಸ್ತೆ, ಚಿಂತಾಮಣಿ, ಕೋಲಾರ ಜಿಲ್ಲೆ.

ಶ್ರೀ ಜಿ.ಎಂ. ಚನ್ನಕೃಷ್ಣಪ್ಪ ಶ್ರೀಮತಿ ಲಕ್ಷ್ಮಮ್ಮ ದೊಡ್ಡಗುಂಜೂರು ಇವರು ಮೃತ ಗಂಗೇಶ್ ಅಲಿಯಾಸ್ ಗಂಗಾಧರನ ತಂದೆ, ತಾಯಿಗಳೆಂದು ಹೇಳಿ ಪರಿಹಾರ ಪಡೆಯಲು ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ಅನ್ವಯ ಈ ಕಛೇರಿಯಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಎಸ್.ಎಸ್. ಷರೀಫ್**
ಸಹಾಯಕ ಕಾರ್ಮಿಕ ಆಯುಕ್ತರು
ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ವಿಭಾಗ-3, ಬೆಂಗಳೂರು.

ಪಿ.ಆರ್.1459

**COMMERCIAL TAXES DEPARTMENT**
**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003- Clarification under Section 59(4) regarding rate of tax applicable on machine tools like machine vice, rotary table and dividing head.

**Ref:** Application Dated:27.04.2006 of M/s B.R. Enterprises, No.149, Near S.R.S. Road, 6th Main, Tumkur Road, Peenya, Bangalore-560 058.

In his application Dated:27.04.2006 cited above, M/s B.R. Enterprises, No.149, Near S.R.S. Road, 6th Main, Tumkur Road, Peenya, Bangalore-560 058, has sought clarification regarding the rate of tax applicable on tools like machine vice, rotary table and dividing head using for metal removable operations.

(2) Section 12(7) of the Karnataka Tax on Entry of Goods Act, 1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clairification requested by the petitioner is within the scope of the aforesaid provision and it is necessary that the clairification be issued for the purpose of maintaining uniformity in the work of assessments and collection.

(3) Hence the following clairification is issued.

**Clarification No. CLR CR 39/ 06-07, Dated:19th September, 2006**

It is hereby clarified that machine tools namely machine vice, rotary table and dividing head used for removing metals falling under Central Excise Tariff No.8456, 8457, 8459, 8460 and 8461 are taxable at 4% as per entry Sl.No.20 of Third Schedule to the Karnataka Value Added Tax Act, 2003 read with notification No.FD 116 CSL 2006(8), Dated:31.03.2006.

**B.A. HARISH GOWDA**
Commissioner of Commercial Taxes,
(Karnataka), Bangalore.

PR-1460

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಇವರ ನಡವಳಿಗಳು

## ಸಂಖ್ಯೆ: ಡಿಆರ್‌ಬಿ-1/ ಸಮಾಪನೆ/ ರದ್ದತಿ/ 31/ 2003-04, ದಿನಾಂಕ:23ನೇ ಸೆಪ್ಟೆಂಬರ್, 2006

**ವಿಷಯ:** ಸಮಾಪನೆಯಲ್ಲಿರುವ ಕಾರ್‌ಮೊಬೈಲ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಪೀಣ್ಯ, ಬೆಂಗಳೂರು-560 058, ಈ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಬಿ-1: ಎಲ್‌ಕ್ಯೂಡಿ:64:1998-99, ದಿನಾಂಕ:30.03.1999.

2) ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1 ಹಾಗೂ ಸಮಾಪನಾಧಿಕಾರಿ, ಕಾರ್‌ಮೊಬೈಲ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರ ಸಂಖ್ಯೆ: ಸಸಂನಿ: ದಕ್ಷಿಣ - ಪುನಃಶ್ಚೇತನ:18:2006-07, ದಿನಾಂಕ:03.08.2006ರ ಪತ್ರ.

**ಪ್ರಸ್ತಾವನೆ:**

ಕಾರ್‌ಮೊಬೈಲ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಪೀಣ್ಯ, ಬೆಂಗಳೂರು-560058 ಈ ಸಂಘವು ಅನೇಕ ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿರುವುದಾಗಿ ವರದಿಯಾಗಿರುವುದರಿಂದ ಈ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಮನಗಂಡು, 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಹೊರಡಿಸಿರುವ ಉಲ್ಲೇಖ (1)ರಲ್ಲಿ ಕಾಣಿಸಿರುವ ಈ ಕಛೇರಿಯ ದಿನಾಂಕ:30.03.1999ರ ಆದೇಶದಲ್ಲಿ, ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಕಲಂ 73ರ ರೀತ್ಯಾ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬೆಂಗಳೂರು 1ನೇ ವಲಯ, ಇವರನ್ನು ಈ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಯಿತು.

ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1 ಹಾಗೂ ಮೇಲ್ಕಂಡ ಸಹಕಾರ ಸಂಘದ ಹಾಲಿ ಸಮಾಪನಾಧಿಕಾರಿ, ಇವರು ಉಲ್ಲೇಖ (2)ರಲ್ಲಿ ಕಾಣಿಸಿರುವ ದಿನಾಂಕ:03.08.2006ರ ಪತ್ರದಲ್ಲಿ ಈ ರೀತಿ ತಿಳಿಸಿರುತ್ತಾರೆ. ಮೇಲ್ಕಂಡ ಸಂಘವು 2000-01 ರವರೆಗೆ ವ್ಯವಹಾರ ನಡೆಸುತ್ತಿದ್ದು, ತದನಂತರ ಯಾವುದೇ ಕೆಲಸ ನಿರ್ವಹಿಸದೇ ಸ್ಥಗಿತಗೊಂಡಿರುವ ಕಾರಣ ಈ ಸಂಘವನ್ನು ಸಮಾಪನೆಗೊಳಿಸಲಾಗಿದೆ. ಸದರಿ ಸಂಘದ ಪ್ರಭಾರವನ್ನು ಈ ಹಿಂದಿನ ಸಮಾಪನಾಧಿಕಾರಿಯವರು ಸ್ವಯಂ ಪ್ರಭಾರ ವಹಿಸಿಕೊಂಡಿರುತ್ತಾರೆ. ಸಂಘದ ಹಿಂದಿನ ಪದಾಧಿಕಾರಿಗಳು ಸೇರಿದಂತೆ, ಒಟ್ಟು 21 ಜನ ಸಂಘದ ಸದಸ್ಯರುಗಳು ಈಗ ಒಂದು ಮನವಿಯನ್ನು ಸಲ್ಲಿಸಿ, ಸಂಘದ ಸಮಾಪನೆ ಆದೇಶವನ್ನು ಹಿಂದಕ್ಕೆ ಪಡೆದು ಈ ಸಂಘವನ್ನು ಸದಸ್ಯರ ಹಿತದೃಷ್ಟಿಯಿಂದ ಮುಂದುವರಿಸಿಕೊಂಡು ಹೋಗಲು ಅವಕಾಶ ನೀಡಿ, ಈ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶ ನೀಡಬೇಕೆಂದು ಕೋರಿರುತ್ತಾರೆ. ಸದರಿ ಮನವಿಯನ್ನು ಪರಿಶೀಲಿಸಲಾಗಿ ಸಂಘದ ಕಾರ್ಯದರ್ಶಿ, ಕಾರ್ಖಾನೆಯಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ಘಟಿಸಿದ ಆಕಸ್ಮಿಕ ಅಪಘಾತದಿಂದ ತಲೆಗೆ ಪೆಟ್ಟು ತಿಂದು ಸ್ವಲ್ಪ ದಿನ ಸ್ಮರಣೆ ಶಕ್ತಿ ಕಳೆದುಕೊಂಡ ಕಾರಣ ಸಂಘದ ಇತರೆ ಪದಾಧಿಕಾರಿಗಳಿಗೆ ಲೆಕ್ಕ ಪುಸ್ತಕ ನಿರ್ವಹಿಸುವ ಬಗ್ಗೆ ಇದ್ದ ತಿಳುವಳಿಕೆಯ ಕೊರತೆಯಿಂದಾಗಿ ಸಂಘದ ದೈನಂದಿನ ಕೆಲಸ ಕಾರ್ಯ ಕುಂಠಿತವಾಗಿರುವುದಾಗಿಯೂ ಹಾಗೂ ಸಂಘವನ್ನು ಸಮಾಪನೆಗೊಳಿಸಿರುವ ವಿಚಾರ ಇತ್ತಿಚೆಗೆ ತಿಳಿದು ಬಂದಿರುವುದಾಗಿ ಸದಸ್ಯರು ತಿಳಿಸಿರುತ್ತಾರೆ. ಪ್ರಸ್ತುತ ಸಂಘವು ಹೊಸದಾಗಿ ಸದಸ್ಯರನ್ನು ಸೇರಿಸಿಕೊಂಡು ಠೇವಣಿ ಪಡೆದು ಜಮೀನು ಖರೀದಿಸಿ ಬಡಾವಣೆ ನಿರ್ಮಿಸುವ ಪ್ರಯತ್ನ ನಡೆಸುತ್ತಿರುವುದರಿಂದ ಸದಸ್ಯರ ಹಿತದೃಷ್ಟಿಯಿಂದ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಸಂಘವನ್ನು ಪುನಃಶ್ಚೇತನಗೊಳಿಸಿಕೊಡಬೇಕೆಂದು ಸಂಘದ ಸದಸ್ಯರು ಕೋರಿರುತ್ತಾರೆ. ಸಂಘದ ಹಿಂದಿನ ಪದಾಧಿಕಾರಿಗಳು ಒದಗಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಸಂಘದಲ್ಲಿ 22.03.2002 ರವರೆಗೆ ಸಣ್ಣಪುಟ್ಟ ವ್ಯವಹಾರಗಳನ್ನು ನಡೆಸಿರುವುದು ಕಂಡುಬಂದಿರುತ್ತದೆ. ಈ ಸಂಘವು 2000-01ನೇ ಸಾಲಿನವರೆಗೆ ಸರ್ವಸದಸ್ಯರ ಸಭೆ ನಡೆಸಿದ್ದು, ತದನಂತರ ಮಹಾಸಭೆ ನಡೆಸಿರುವುದಿಲ್ಲ. ಸಂಘದ ಆಡಳಿತ ಮಂಡಳಿಗೆ 2004 ನಂತರ ಚುನಾವಣೆ ನಡೆಸಿರುವುದಿಲ್ಲ. ಸಂಘವು ಮಾದರಿ ಉಪನಿಯಮಗಳನ್ನು ಅಳವಡಿಸಿಕೊಂಡಿದ್ದು, ಇವರ ಕಾರ್ಯ ವ್ಯಾಪ್ತಿಯು ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಬಿಡಿಎ ಪ್ರದೇಶಗಳಿಗೆ ಸೀಮಿತವಾಗಿದ್ದು, ಈ ಕಾರಣದಿಂದ ಈ ಕಛೇರಿಯಿಂದ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುವುದು ತಪ್ಪಾಗಿರುತ್ತದೆ. ಆದ್ದರಿಂದ ಸಂಘದ ಸಮಾಪನಾ ಆದೇಶವನ್ನು ಹಿಂದಕ್ಕೆ ಪಡೆದು ಸದಸ್ಯರ ಹಿತದೃಷ್ಟಿಯಿಂದ ಈ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶ ನೀಡಬೇಕೆಂದು ಸಮಾಪನಾಧಿಕಾರಿಯವರು ಕೋರಿರುತ್ತಾರೆ.

ಸಮಾಪನಾಧಿಕಾರಿಯವರು ಸಲ್ಲಿಸಿರುವ ಪ್ರಸ್ತಾವೆ ಹಾಗೂ ಸಂಘದ ಸದಸ್ಯರುಗಳ ಸಲ್ಲಿಸಿರುವ ಮನವಿ ಇವುಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಮೇಲ್ಕಂಡ ಸಂಘವು ಹೊಸದಾಗಿ ಸದಸ್ಯರನ್ನು ಸೇರಿಸಿಕೊಂಡು ತನ್ನ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡುವ ಉದ್ದೇಶದಿಂದ ಜಮೀನು ಖರೀದಿಸಿ ಬಡಾವಣೆ ನಿರ್ಮಿಸಲು ಉದ್ದೇಶಿಸಿರುವುದು ಕಂಡುಬರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಬಿಡಿಎ ವ್ಯಾಪ್ತಿಗೆ ಸೀಮಿತವಾಗಿರುವುದರಿಂದ ಈ ಸಂಘವನ್ನು ಈ ಕಛೇರಿಯ ದಿನಾಂಕ:30.03.1999ರ ಆದೇಶದ ರೀತ್ಯಾ ಸಮಾಪನೆಗೊಳಿಸಿರುವುದು ಕಂಡುಬರುತ್ತದೆ. ಆದಕಾರಣ, ಸಂಘದ ಸದಸ್ಯರ ಹಿತದೃಷ್ಟಿಯಿಂದ ಮೇಲ್ಕಂಡ ಸಂಘವನ್ನು ಸಮಾಪನೆಗೊಳಿಸಿರುವ ಈ ಕಛೇರಿಯ ದಿನಾಂಕ:30.03.1999ರ ಆದೇಶವನ್ನು ಹಿಂದಕ್ಕೆ ಪಡೆದು ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಕ್ರ. ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು-11, ಬೆಂಗಳೂರು ನಗರ ಜಿಲ್ಲೆ, ಆದ ನಾನು ಕಾರ್‌ಮೊಬೈಲ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಪೀಣ್ಯ, ಬೆಂಗಳೂರು-560 058 ಈ ಸಹಕಾರ ಸಂಘವನ್ನು ಕಲಂ 72(2) ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಬಿ-1:ಎಲ್‌ಕ್ಯೂಡಿ:64: 1998-99, ದಿನಾಂಕ:30.03.1999ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸದರಿ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ.

**"ಷರತ್ತುಗಳು"**

1. ಸಂಘದ ದುಡಿಯುವ ಬಂಡವಾಳವನ್ನು ಷೇರು ಧನ ಇತ್ಯಾದಿ ಸಂಗ್ರಹಿಸುವುದರ ಮೂಲಕ ಹೆಚ್ಚಿಸಿಕೊಳ್ಳುವುದು.

2. ಸಂಘವು ಸದಸ್ಯರಿಗೆ ನಿವೇಶನ ಹಂಚಿಕೆ ಮಾಡುವ ಬಗ್ಗೆ ಯೋಗ್ಯವಾದ ಜಮೀನನ್ನು ನಿಯಮಾನುಸಾರ ಖರೀದಿಸಿ ಬಡಾವಣೆ ನಿರ್ಮಿಸಿ, ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡಲು ಕ್ರಮ ಕೈಗೊಳ್ಳತಕ್ಕದ್ದು.

3. ಸಂಘದ ಈ ತಹಲ್‌ವರೆಗಿನ ಲೆಕ್ಕಪುಸ್ತಕಗಳನ್ನು ಲೆಕ್ಕ ಪರಿಶೋಧನಾ ಇಲಾಖೆಯಿಂದ ಪರಿಶೋಧನೆ ಮಾಡಿಸಲು ಕ್ರಮವಿಡತಕ್ಕದ್ದು.

4. ಸಂಘವು ಕೂಡಲೇ ಸಂಘದ ಸರ್ವಸದಸ್ಯರ ಸಭೆಯನ್ನು ನಿಯಮಾನುಸಾರ ಕರೆಯತಕ್ಕದ್ದು.

5. ಸಂಘದ ಆಡಳಿತ ಮಂಡಳಿಗೆ ಕೂಡಲೇ ನಿಯಮಾನುಸಾರ ಇಲಾಖೆಯಿಂದ ನೇಮಕವಾಗಿರುವ ಚುನಾವಣಾಧಿಕಾರಿಯವರ ಚುನಾವಣೆ ನಡೆಸಿ, ನೂತನ ಆಡಳಿತ ಮಂಡಳಿಗೆ ಸಂಘದ ಪ್ರಭಾರವನ್ನು ವಹಿಸಿಕೊಡತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:23.09.2006 ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**

ಪಿ.ಆರ್.1461

ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

**HIGH COURT OF KARNATAKA, BANGALORE**
**NOTIFICATION No.HCBB 212/ 2006, Dated:27th September, 2006**
**DASARA VACATION OF 2006**

The High Court will remain closed for Dasara Vacation from Tuesday the 3rd October 2006 to Friday the 6th October 2006 (Both days inclusive).

No appeals, Petitions or Applications of Civil nature will be received during the Vacation except in cases where it is sought to obtain urgent Interim Orders like Temporary Injunction, Attachment and/ or stay of Proceedings.

Criminal Appeals, Criminal Revision Petitions, Criminal Petitions and urgent applications in Criminal matters will be received during the Dasara Vacation.

During the Dasara Vacation, the Office of the High Court will remain open from 10.15 AM to 2.00 PM from Tuesday the 3rd October 2006 to Friday the 6th October 2006 (Both days inclusive). Papers will be received from 10.30 AM to 12.30 PM on the days on which the Office will be open. On the Vacation sitting days, the working hours of the Office shall be from 10.15 AM to 5.00 PM.

Vacation Benches mentioned hereunder will sit in Court Halls mentioned against them on the "SITTING DAYS" noted below at 10.30 AM during the Vacation to hear urgent matters. All matters of the nature referred to above filed during Vacation and inclusive of the day previous to the sitting day will be posted before the Court, But those filed on the sitting day will not be posted on that day, except by Special Orders of the Vacation Bench or the Vacation Judge, as the case may be,

| Vacation Bench Division Bench | Court Hall | Vacation Judges Single Bench | Court Hall |
|---|---|---|---|
| **Sitting day 04.10.2006** | | | |
| Hon'ble Mr. Justice N.S. Veerabhadraiah AND Hon'ble Mr. Justice N. Ananda (All Division Bench matters) | 9 | Hon'ble Mr. Justice N.S. Veerabhadraiah | 9 |
| | | Hon'ble Mr. Justice Subhash B. Ali | 10 |
| | | Hon'ble Mr. Justice N. Ananda | 11 |

| Vacation Bench Division Bench | Court Hall | Vacation Judges Single Bench | Court Hall |
|---|---|---|---|
| **Sitting day 06.10.2006** | | | |
| Hon'ble Mr. Justice N. Kumar AND Hon'ble Mr. Justice Jawad Rahim (All Division Bench matters) | 9 | Hon'ble Mr. Justice N. Kumar | 9 |
| | | Hon'ble Mr. Justice A.S. Bopanna | 10 |
| | | Hon'ble Mr. Justice Jawad Rahim. | 11 |

**SITTING DAYS:**

The sitting will be on Wednesday the 4th and Friday the 6th October 2006 and on such other day as may be fixed by the Vacation Bench/ Vacation Judge.

On the days of sitting, after completion of the Division Bench sitting, the Vacation Judges will sit single and take up single Bench matters.

No Memos for posting will be entertained by the Registrar (Judicial)/ Deputy Registrar during the Dasara Vacation.

Motions for taking up the case for Orders/ Admission/ Preliminary Hearing shall be made before the respective Courts.

By Order of Hon'ble Chief Justice,

PR-1462

**A.P. MURARI**

Registrar (Judicial).

## ಉಪನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ

## ಜ್ಞಾಪನಾ

### ಸಂಖ್ಯೆ: ಇ2 ಪ್ರಾಶಾಶಿ ಶಿಸ್ತುಕ್ರಮ: ಎನ್‌ಡಿ:05-06/2415, ದಿನಾಂಕ:24ನೇ ಆಗಸ್ಟ್, 2006

**ವಿಷಯ:** ಶ್ರೀಮತಿ ನೂರಿನಾ ಡಿಸೋಜ ಸಶಿ, ಸಹಿ ಪ್ರಾ ಶಾಲೆ ಕಟ್ನೂರ ತಾ: ಹುಬ್ಬಳ್ಳಿ ಇವರ ಅನಧೀಕೃತ ಗೈರುಹಾಜರಿ ಪ್ರಯುಕ್ತ ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ:** 1) ಶ್ರೀಮತಿ ನೂರಿನಾ ಡಿಸೋಜ, ಸಶಿ, ಇವರ ಮನವಿ ದಿನಾಂಕ:30.01.2003.

2) ಪ್ರಧಾನ ಗುರುಗಳು ಸ ಕ ಗಂ ಹಿ ಪ್ರಾ ಶಾಲೆ ಕಟ್ನೂರ ಇವರ ವರದಿ ದಿನಾಂಕ: 04.02.2003/ 10.04.2003/ 02.06.2003 ಹಾಗೂ 18.09.2004.

3) ದಿನಾಂಕ:17.12.2005 ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ನೋಟೀಸ್.

4) ಕ್ಷೇತ್ರ ಶಿಕ್ಷಣಾಧಿಕಾರಿಗಳು ಗ್ರಾಮೀಣ ವಲಯ ಹುಬ್ಬಳ್ಳಿ ಇವರ ಪತ್ರ ಸಂಖ್ಯೆ: ಟಿ3 ಪ್ರಸ್ತಾವನೆ ಪ್ರಾ ಶಾ ಶಿ ಎನ್‌ಡಿ ಗೈರು: 03-04, ದಿನಾಂಕ:02.06.2006.

**ಪ್ರಸ್ತಾವನೆ:**

ಶ್ರೀಮತಿ ನೂರಿನಾ ಡಿಸೋಜ, ಸಶಿ ಸರ್ಕಾರ ಹಿ ಪ್ರಾ ಶಾಲೆ ಕಟ್ನೂರ ತಾ: ಹುಬ್ಬಳ್ಳಿ ಇವರ ದಿನಾಂಕ:30.01.2003 ರಿಂದ ಇ ಎನ್ ಟಿ ಸಮಸ್ಯೆ ಇರುವುದಾಗಿ ವೈದ್ಯಕೀಯ ಆಧಾರದ ಮೇಲೆ ಎರಡು ಮೂರು ತಿಂಗಳು ರಜೆಕೋರಿ ಕೈ ಬರಹ ಅರ್ಜಿ ಸಲ್ಲಿಸಿ ಹೋಗಿರುವರು.

ಇಲ್ಲಿಯವರೆಗೆ ಕರ್ತವ್ಯಕ್ಕೆ ಹಾಜರಾಗದೆ ಗೈರು ಹಾಜರಾಗಿರುವರು. ಈ ಕುರಿತು ಇವರಿಗೆ ಸೇವೆಗೆ ಹಾಜರಾಗುವಂತೆ ದಿನಾಂಕ:15.03.2004 ರಂದು ಪತ್ರ ಮುಖಾಂತರ ಬಿ.ಇ.ಓ. ರವರು ಸೂಚಿಸಿರುವರು. ಆದರೂ ಪತ್ರ ಸ್ವೀಕರಿಸದೇ ಅದು ಬಿ.ಇ.ಓ. ಹುಬ್ಬಳ್ಳಿ ಇವರ ಕಛೇರಿಗೆ ದಿನಾಂಕ:22.03.2004ರಂದು ವಾಪಸ್ಸು ಬಂದಿರುತ್ತದೆ. ದಿನಾಂಕ:30.11.2005 ರಂದು ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆ ಮುಖಾಂತರ (17.12.2005 ರಂದು ಪ್ರಕಟವಾಗಿದೆ) ನೋಟಿಸ್ ಪ್ರಕಟಣೆಯಾದ ಒಂದು ವಾರದೊಳಗಾಗಿ ಹಾಜರಾಗಲು ಸೂಚಿಸಲಾಗಿತ್ತು. ತಪ್ಪಿದಲ್ಲಿ ಸಿಸಿಎ ನಿಯಮ 1957ರ ನಿಯಮ 8(7) ಮತ್ತು (8) ರ ಪ್ರಕಾರ ಸೇವೆಯಿಂದ ವಜಾ ಮಾಡಲಾಗುವುದು ಎಂದು ಪ್ರಕಟಣೆ ಹೊರಡಿಸಲಾಗಿತ್ತು. ಆದರೂ ಸದರಿ ಶಿಕ್ಷಕಿಯರು ಈವರೆಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಎಂದು ಹಾಗೂ ಸಿಸಿಎ ನಿಯಮಾನುಸಾರ ಇವರನ್ನು ಸೇವೆಯಿಂದ ವಜಾ ಮಾಡಬೇಕೆಂದು ಕ್ಷೇತ್ರ ಶಿಕ್ಷಣಾಧಿಕಾರಿಗಳು ಉಲ್ಲೇಖ 4 ರಂತೆ ಶಿಫಾರಸ್ಸು ಪಡಿಸಿರುವರು.

**ಆದೇಶ**

ಶ್ರೀಮತಿ ನೂರಿನಾ ಡಿಸೋಜ ಸಶಿ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕಟ್ನೂರ ಹುಬ್ಬಳ್ಳಿ ತಾಲ್ಲೂಕು ಎಂಬ ನೀವು ದಿನಾಂಕ:30.01.2003 ರಿಂದ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿದ್ದು ಕಾರ್ಯಾಲಯದಿಂದ ನೀಡಲಾದ ನೋಟಿಸಿಗೆ ಉತ್ತರಿಸದೆ ಅವುಗಳನ್ನು ನಿರಾಕರಿಸಿರುವುದು ಹಾಗೂ ಪತ್ರಿಕಾ ಪ್ರಕಟಣೆಗೆ ಯಾವುದೇ ಉತ್ತರ ನೀಡದೆ ಇರುವುದು ನಿಮಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವ ಬಗ್ಗೆ ಆಸಕ್ತಿ ಇಲ್ಲವೆಂಬುದು ಕಂಡುಬರುತ್ತದೆ ಹಾಗೂ ಕರ್ತವ್ಯಕ್ಕೆ 3 ವರ್ಷ ಮೇಲ್ಪಟ್ಟು ಅನಧೀಕೃತ ಗೈರು ಹಾಜರಿರುವುದರಿಂದ ಶ್ರೀಮತಿ ನೂರಿನಾ ಡಿಸೋಜ ಸ ಶಿ ಹಿ ಪ್ರಾ ಶಾಲೆ ಕಟ್ನೂರ ಆಗಿರುವ ನಿಮ್ಮನ್ನು ಸರ್ಕಾರಿ ಸೇವೆಯಿಂದ ಸಿಸಿಎ ನಿಯಮ 1957ರ ನಿಯಮ- ಉಪನಿಯಮ (8)ರ ಅನ್ವಯ ಸೇವೆಯಿಂದ ವಜಾ ಮಾಡಿ ಆದೇಶಿಸಲಾಗಿದೆ. ಸೇವೆಯಿಂದ ವಜಾ ಮಾಡಿದ ದಿನಾಂಕವು ಪತ್ರಿಕಾ ಪ್ರಕಟಣೆ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುವರು ಮನವಿಗೆ ಹಾಗೂ ಇನ್ನಿತರ ಅಪೀಲುಗಳಿಗೆ ಅವಕಾಶವಿರುವುದಿಲ್ಲ.

**ವ್ಹಿ.ಎಂ. ಪಾಟೀಲ**

ಪಿ.ಆರ್.1463

ಶಿಸ್ತು ಪ್ರಾಧಿಕಾರಿಗಳು/ ಉಪನಿರ್ದೇಶಕರು (ಆಡಳಿತ),

ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

## ಅರಣ್ಯ ಇಲಾಖೆ

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ ಅರಣ್ಯ ಸಂಚಾರಿ ದಳ ಶಿವಮೊಗ್ಗ ವೃತ್ತ, ಶಿವಮೊಗ್ಗ

## ಪ್ರಕಟಣೆ

### ಸಂಖ್ಯೆ: ಎ1.71ಎ. ಅಮೊ.30/ 2006-07, ದಿನಾಂಕ:25ನೇ ಸೆಪ್ಟೆಂಬರ್, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ವಶಪಡಿಸಿಕೊಂಡು ಶ್ರೀಗಂಧವನ್ನು ಹಾಗೂ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 71ಎ ಯ ಪ್ರಕಾರ ಮುಂದಿನ ದಾವೆ ನಡೆಸಲು ಈ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಆದುದರಿಂದ ಸದರೀ ವಾಹನಗಳ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆಗಳು ರುಜುವಾತುಪಡಿಸಲು ಇದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿ ಇರುವ ವಾಹನದ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ, ಈ ಪ್ರಕಟಣೆಯು ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು, ನಿಗದಿಪಡಿಸಿದ ಅವಧಿಯೊಳಗಡೆ ಯಾವುದೇ ಅಹವಾಲು ಇಲ್ಲವಾದಲ್ಲಿ ಅಥವಾ ನಂತರ ಯಾವುದೇ ಅಹವಾಲು ಬಂದಲ್ಲಿ ಅವನ್ನು ಪರಿಗಣಿಸಲಾಗುವುದಿಲ್ಲ ಹಾಗೂ 1963ರ ಕರ್ನಾಟಕ ಅರಣ್ಯ ಕಾಯ್ದೆಯ 71ಎ ನಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು.

| ಅ.ಮೊ. ಸಂಖ್ಯೆ ಮತ್ತು ದಿನಾಂಕ | ವಾಹನ ಮಾದರಿ ಹಾಗೂ ಅದರ ಸಂಖ್ಯೆ | ಛಾಸಿ ಸಂಖ್ಯೆ | ಇಂಜಿನ್ ಸಂಖ್ಯೆ |
|---|---|---|---|
| **ಮೊಕದ್ದಮೆ ದಾಖಲುಪಡಿಸಿದವರು:** ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ. | | | |
| 30/ 06-07 22.09.2006. | ಟಾಟ ಮೊಬೈಲ್ ಗೂಡ್ಸ್ ಕ್ಯಾರಿಯರ್ ಕೆಎ.17.3617. | 374005 ಕೆ 93903108 | 483 ಡಿಎಲ್.41 ಜೆ 93715968 |

**ಕೆ.ಎನ್. ಲಕ್ಷ್ಮೀನಾರಾಯಣ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗವೃತ್ತ, ಶಿವಮೊಗ್ಗ.

ಪಿ.ಆರ್.1465

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ, ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಆದಾ: ಕಾನಪ: ಡಿವಿಜಿ:ಸಿಆರ್-85/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

ಸಾಕಮ್ಮ ಬಿನ್ ಲೇ: ಗುಡ್ಡಪ್ಪ, ಮತ್ತಿತರ 4 ಜನರು.
ವಾಸ: ರಾಜನಹಳ್ಳಿ ಗ್ರಾಮ, ಹರಿಹರ ತಾಲ್ಲೂಕು.

**ಪ್ರತಿವಾದಿಗಳು:**

1) ಬಿ. ರಾಜಶೇಖರಯ್ಯ ಬಿನ್ ರುದ್ರಯ್ಯ, ಸ್ವರಾಜ್ ಮಜ್ದ ಮಾಲೀಕರು, ನಂ.ಕೆಎ.37/ 3974.
ವಾಸ: ರಾಮರಾವ್ ಹಾಸ್ಪೆಲ್ ಹತ್ತಿರ, ಪಿಂಜಾರ್ ಓಣಿ ಗಂಗಾವತಿ, ಕೊಪ್ಪಳ ಜಿಲ್ಲೆ.
2) ವಿಶಾಲಾಕ್ಷಿ ಕೋಂ ಬಿ. ಮಲ್ಲೇಶಪ್ಪ, ವಾಸ: ಎ. ಬ್ಲಾಕ್, ವಿದ್ಯಾನಗರ, ಹರಿಹರ.
3) ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ವಾಲಿ ಕಾಂಪ್ಲೆಕ್ಸ್, ಶಿವಮೊಗ್ಗ ರೋಡ್, ಹರಿಹರ.

### ಪ್ರಕರಣೆ

ಶ್ರೀಮತಿ ಸಾಕಮ್ಮ ಮತ್ತಿತರ 4 ಜನರು ಇವರು ಮೃತ ಗುಡ್ಡಪ್ಪ ಇವರ ಹೆಂಡತಿ ಮತ್ತು ತಾಯಿ ಹಾಗೂ ತಂಗಿಯರು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗುಡ್ಡಪ್ಪ ರವರು ಒಂದನೇ ಪ್ರತಿವಾದಿಗಳಾದ ಬಿ.ರಾಜಶೇಖರಯ್ಯ ಇವರ ಲಾರಿ ಯಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಯಲದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು
ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1466

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ, ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಪ್ರಕರಣ ಸಂಖ್ಯೆ: ಸಕಾಆದಾ: ಕಾನಪ: ಡಿವಿಜಿ:ಸಿಆರ್-86/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಶ್ರೀಮತಿ ರೇಣುಕಾ ಕೋಂ ಶಂಕರಯ್ಯ ಪ್ಯಾಟಿ ಮಠ, ಮತ್ತಿಬ್ಬರು.
ಎಲ್ಲರವಾಸ: ಕೇರ್ ಆಫ್ ದೇವರಾಜ್ ಬಿನ್ ಮಲ್ಲಪ್ಪ, ಡೋರ್‌ನಂ.10 1ನೇ ಮೈನ್, 1ನೇ ಕ್ರಾಸ್, ಮಲ್ಲಿಕಾರ್ಜುನ ಸದನ, ಇಂಡಸ್ಟ್ರಿಯಲ್ ಏರಿಯಾ, ದಾವಣಗೆರೆ.

**ಪ್ರತಿವಾದಿಗಳು:**

1) ಶ್ರೀ ಜಿ. ಗದಿಗೆಪ್ಪ ಬಿನ್ ಚನ್ನಬಸಯ್ಯ ಹಾದಿರಿ ಮಠ, ಟಾಟಾ ಯೂನಿಟ್ ಮಾಲೀಕರು ನಂ.ಕೆಎ.27/ಟಿ.4545-4559, ವಾಸ: ಮೋಟೆಬೆನ್ನೂರು ಗ್ರಾಮ, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ.
2) ದಿ ಡಿವಿಜನಲ್ ಮ್ಯಾನೇಜರ್ ನ್ಯಾಷನಲ್ ಇನ್ಶೂರೆನ್ಸ್ ಕಂ.ಲಿ., ವಿದ್ಯಾನಗರ ರೋಡ್, ಎಂ.ಸಿ.ಸಿ.ಬಿ. ಬ್ಲಾಕ್, ದಾವಣಗೆರೆ.

### ಪ್ರಕರಣೆ

ಶ್ರೀಮತಿ ರೇಣುಕಾ, ಮತ್ತಿಬ್ಬರು ಇವರು ಮೃತ ಶಂಕರಯ್ಯ ಇವರ ಹೆಂಡತಿ ಮತ್ತು ಮಕ್ಕಳು ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಂಕರಯ್ಯ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಜಿ ಗದಿಗೆಪ್ಪ ಇವರ ಟಾಟಾ ಯೂನಿಟ್‌ನಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಯಲದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು
ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1467

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಶಿಸ್ತುಪ್ರಾಧಿಕಾರಿಗಳು ಸಾಗರ ವಿಭಾಗ, ಸಾಗರ ಅವರ ಕಛೇರಿಯ ನಡವಳಿಗಳು**
**ಸಂಖ್ಯೆ:ಕ.ಆ.ಕ್ರ:48/ 2006-07, ದಿನಾಂಕ:27ನೇ ಸೆಪ್ಟೆಂಬರ್, 2006**

**ವಿಷಯ:** ಶ್ರೀ ಎಂ. ಮಧುಕರ ಅರಣ್ಯರಕ್ಷಕ ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ನೀಡಿಕೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಕ್ರ:ಎ3/ ಸಿಬ್ಬಂದಿ/ ಇಎನ್‌ಕ್ವ್ಯೂ/ ಸಿಆರ್/ 408/ 05-06, ದಿನಾಂಕ:05.06.2004.

2) ಆಪಾದಿತ ನೌಕರ ಶ್ರೀ ಎಂ. ಮಧುಕರ ಅರಣ್ಯರಕ್ಷಕರವರ ಪ್ರಾಥಮಿಕ ಸಮಜಾಯಿಷಿ ಹೇಳಿಕೆ ದಿನಾಂಕ:07.06.2004.

3) ಈ ಕಛೇರಿಯ ಆದೇಶ ಕ್ರ:ಎ3/ ಸಿಬ್ಬಂದಿ/ ಅಗೈ/ ಸಿಆರ್/ 408/ 03-04, ದಿನಾಂಕ:22.06.2004.

4) ವಿಚಾರಣಾಧಿಕಾರಿ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ಉಪ ವಿಭಾಗ, ಸಾಗರ ಇವರ ವಿಚಾರಣಾ ವರದಿ ದಿನಾಂಕ:21.10.2004.

5) ಈ ಕಛೇರಿಯಿಂದ ಆಪಾದಿತ ನೌಕರರಿಗೆ ಜಾರಿ ಮಾಡಿದ 2ನೇ ಕಾರಣ ಕೇಳಿ ನೋಟೀಸು ದಿನಾಂಕ:11.08.2006.

6) ಆಪಾದಿತ ನೌಕರರಾದ ಶ್ರೀ ಎಂ. ಮಧುಕರ ಅರಣ್ಯ ರಕ್ಷಕ ಇವರು 2ನೇ ಕಾರಣ ಕೇಳಿ ನೋಟೀಸು ದಿನಾಂಕ:11.08.2006ಕ್ಕೆ ನೀಡಿದ ಪ್ರತಿರಕ್ಷಣೆಯ ಹೇಳಿಕೆ ದಿನಾಂಕ:06.09.2006.

**ಪ್ರಸ್ತಾವನೆ:**

ಶ್ರೀ ಎಂ. ಮಧುಕರ ಅರಣ್ಯರಕ್ಷಕ ಇವರ ವಿರುದ್ಧ Karnataka Civil Service Rule-106a ಅನ್ವಯ ಅನಧಿಕೃತ ಗೈರುಹಾಜರಿಯ ಆರೋಪದ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ಈ ಕಛೇರಿಯ ಉಲ್ಲೇಖ (1)ರ ನೋಟಿಸಿನಲ್ಲಿ ದೋಷಾರೋಪಣಾ ಪಟ್ಟಿಯನ್ನು ನೀಡಲಾಗಿತ್ತು. ಮೇಲಿನ ಆಪಾದಿತ ನೌಕರರು ಉಲ್ಲೇಖ (2)ರ ಪ್ರಾಥಮಿಕ ಸಮಜಾಯಿಷಿಕೆಯಲ್ಲಿ ತಮ್ಮ ವಿರುದ್ಧದ ಆಪಾದನೆಗಳನ್ನು ಅಲ್ಲಗಳೆದಿರುವುದರಿಂದ ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಈ ಕಛೇರಿಯ ಉಲ್ಲೇಖ (3)ರ ಆದೇಶದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ಉಪವಿಭಾಗ, ಸಾಗರ ಇವರನ್ನು KCS (Classification, Control and Appeal) Rule-11(2) ರನ್ವಯ ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ವಿಚಾರಣಾಧಿಕಾರಿಗಳು ಕೂಲಂಕುಷ ವಿಚಾರಣೆ ನಡೆಯಿಸಿ ಆಪಾದನೆಗಳು ರುಜುವಾತು ಆಗಿರುತ್ತದೆಂಬ ಫಲಿತಾಂಶದೊಂದಿಗೆ ಉಲ್ಲೇಖ (4)ರ ವಿಚಾರಣಾ ವರದಿಯನ್ನು ಮಂಡಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯ ಕುರಿತು ಅಂತಿಮ ನಿರ್ಣಯ ತೆಗೆದುಕೊಳ್ಳುವ ಮುನ್ನ ಕರ್ನಾಟಕ ಸರ್ಕಾರದ ಸುತ್ತೋಲೆ ಕ್ರ: ಸಿಆಸುಇ-12-ಸೇಇವಿ/ 94 ದಿನಾಂಕ:07.12.1994ರಲ್ಲಿ ಸೂಚಿಸಿರುವಂತೆ ಭಾರತ ಸರ್ಕಾರದ ವಿರುದ್ಧ ಮೊಹಮ್ಮದ್ ರಂಜಾನ್ ಖಾನ್ ಪ್ರಕರಣ (AIR 1991 Supreme Court 471) ರಲ್ಲಿಯ ತೀರ್ಮಾನದನ್ವಯ ಈ ಪ್ರಕರಣದಲ್ಲಿ ಆಪಾದಿತ ನೌಕರರಿಗೆ ಅವರ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಉಲ್ಲೇಖ (5)ರ ಪತ್ರ ದಿನಾಂಕ:11.08.2006ರ ಮೂಲಕ ಒದಗಿಸಿ ಸದರಿ ವರದಿಯನ್ನು ಏಕೆ ಅಂಗೀಕರಿಸಬಾರದು ಎಂಬ ಬಗ್ಗೆ ಕಾರಣ ನೀಡುವಂತೆ ಅವರಿಗೆ ನಿರ್ದೇಶಿಸಲಾಯಿತು ಅಲ್ಲದೆ ಈ ಬಗ್ಗೆ ಅವರ ಹೇಳಿಕೆ ಏನಾದರೂ ಇದ್ದಲ್ಲಿ ಸದರಿ ನೋಟಿಸು ತಲುಪಿದ 15 ದಿವಸಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಅವರಿಗೆ ತಿಳಿಸಲಾಗಿತ್ತು ಆಪಾದಿತ ಸರ್ಕಾರಿ ನೌಕರರು ಸದರಿ ನೋಟಿಸನ್ನು ದಿನಾಂಕ:22.08.2006ರಂದು ಪಡೆದುಕೊಂಡು ಅವರ ಉಲ್ಲೇಖ (6)ರ ಪತ್ರದಲ್ಲಿ ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅವರಿಂದ ಪಡೆದ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿ, ಸದರಿ ಆಪಾದಿತ ನೌಕರರ ದಿನಾಂಕ:15.12.1997 ರಿಂದ 12.05.2004ರವರೆಗೆ ಒಟ್ಟು 2705 (7years 5monhts) ದಿನಗಳ ಗೈರುಹಾಜರಿಯ ಸಂಬಂಧವಾಗಿ ವಿಚಾರಣಾಧಿಕಾರಿಗಳ ವರದಿಯ ಕುರಿತು ಅಂತಿಮ ನಿರ್ಣಯ ತೆಗೆದುಕೊಳ್ಳುವ ಬಗ್ಗೆ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕಾಗಿರುತ್ತದೆ.

(ಅ) ಕೂಲಂಕುಷ ವಿಚಾರಣೆಯ ಸಮಯದಲ್ಲಿ ವಿಚಾರಣಾಧಿಕಾರಿಗಳು 1957ರ KCS (Classification, Control and Appeal) Rule-11(7) ರಿಂದ (23)ರಲ್ಲಿ ನಿರೂಪಿಸಿದ ವಿಧಿ ವಿಧಾನಗಳನ್ನು ಅನುಸರಿಸಿರುತ್ತಾರೆಯೇ?

(ಆ) (ಅ)ರಲ್ಲಿ ವಿವರಿಸಿದ ನಿಯಮ-11ರ ರೀತ್ಯಾ ವಿಧಿ ವಿಧಾನಗಳನ್ನು ಅನುಸರಿಸಿಲ್ಲವಾದಲ್ಲಿ ಯಾವುದೇ ನ್ಯೂನತೆಯು ಆಪಾದಿತ ನೌಕರರ ಸ್ವಸಮರ್ಥನೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡುವಂತಹದ್ದಾಗಿದೆಯೇ?

(ಇ) ವಿಚಾರಣಾಧಿಕಾರಿಗಳು ನೀಡಿದ ಫಲಿತಾಂಶವು ವಿಚಾರಣೆಯ ಸಮಯದಲ್ಲಿ ಹಾಜರುಪಡಿಸಿದ ವಿವಿಧ ದಾಖಲೆಗಳು, ಸಾಕ್ಷಿಗಳ ಹೇಳಿಕೆಗಳು, ವಾದ ಪ್ರತಿವಾದ ಇವುಗಳ ಪರಸ್ಪರ ತುಲನೆಯಿಂದ ಕೂಡಿದವುಗಳಾಗಿವೆಯೇ ಮತ್ತು ಇವರ ವರದಿ ಹಾಗೂ ಫಲಿತಾಂಶ ಸ್ವೀಕಾರ್ಹವೆ?

ವಿಚಾರಣೆ ದಾಖಲೆಗಳನ್ನು ಪರಿಶೀಲಿಸುವಾಗ ವಿಚಾರಣಾಧಿಕಾರಿಗಳು ಆಪಾದಿತ ನೌಕರರಿಗೆ ದಾಖಲೆಗಳನ್ನು ಪರಿಶೀಲಿಸಲು ಅವಕಾಶ, ಆಪಾದನೆಗಳಿಗೆ ಪರಸ್ಪರ ಸಂಬಂಧವಿರುವ ಹೆಚ್ಚಿನ ದಾಖಲೆಗಳನ್ನು ಪರಿಶೀಲಿಸಲು ಅವಕಾಶ, ಸಾಕ್ಷಿಗಳ ಹೇಳಿಕೆಗಳನ್ನು ಆಪಾದಿತ ನೌಕರರ ಸಮಕ್ಷಮ ಪಡೆದಿರುವುದು. ಪ್ರತಿ ಸವಾಲು ಹಾಕಲು ಅವಕಾಶ ನೀಡಿರುವುದು, ಆಪಾದಿತ ನೌಕರರಿಗೆ ತಮ್ಮ ಪರವಾಗಿ ಸಾಕ್ಷಿಗಳನ್ನು ಹಾಜರುಪಡಿಸಲು ಅವಕಾಶ ನೀಡಿರುವುದು, ಮಂಡನಾಧಿಕಾರಿಯು ದಾಖಲ್ಮಾಡಿದ ಲಿಖಿತ ವಾದದ ಸಾರಾಂಶವನ್ನು ಆಪಾದಿತ ನೌಕರರಿಗೆ ಒದಗಿಸಿರುವುದು ವ್ಯಕ್ತವಾಗಿರುತ್ತದೆ. ಆದುದರಿಂದ ಪ್ರಶ್ನೆ (ಅ) ಗೆ "ಹೌದು" ಎಂದೂ ಪ್ರಶ್ನೆ (ಆ)ಗೆ "ಉದ್ಭವಿಸುವುದಿಲ್ಲವೆಂದೂ" ಉತ್ತರವನ್ನು ಕಂಡುಕೊಳ್ಳಬಹುದಾಗಿದೆ.

ಆಪಾದಿತ ನೌಕರರ ವಿರುದ್ಧದ ಆಪಾದನೆಯು ಅನಧೀಕೃತ ಗೈರುಹಾಜರಿಗೆ ಸಂಬಂಧಿಸಿದಂತೆ, ಶಿಕಾರಿಪುರ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಎಂ. ಮಧುಕರ ಅರಣ್ಯರಕ್ಷಕ ಇವರನ್ನು ಕಾರ್ಗಲ್ ವಲಯಕ್ಕೆ ವರ್ಗಾವಣೆ ಮಾಡಲಾಗಿ ಈ ನೌಕರರು ಕಾರ್ಗಲ್ ವಲಯದಲ್ಲಿ ದಿನಾಂಕ:15.12.1997ರಂದು ಕಾರ್ಯ ವರದಿ ಮಾಡಿಕೊಂಡು ಸಕ್ಷಮ ಪ್ರಾಧಿಕಾರಿಯ ಪೂರ್ವಾನುಮತಿ ಪಡೆಯದೆ ಸರ್ಕಾರಿ ಕೆಲಸ ನಿರ್ವಹಿಸದೆ ಗೈರು ಹಾಜರಿಯಾಗಿರುತ್ತಾರೆ. ಈ ನೌಕರರಿಗೆ ಆ ಸಮಯದಲ್ಲಿ ಕಾರ್ಗಲ್ ವಲಯಾರಣ್ಯಾಧಿಕಾರಿಗಳು ಪ್ರಭಾರ ವಹಿಸಿಕೊಂಡು ವರದಿ ನೀಡಲು ಸೂಚಿಸಿದ್ದಾಗ್ಯೂ ಈ ನೌಕರರು ವರ್ಗಾಯಿತ ಸ್ಥಳದ ಪ್ರಭಾರವನ್ನು ವಹಿಸಿಕೊಳ್ಳದೆ ಗೈರು ಹಾಜರಿಯಾಗಿದ್ದುಕೊಂಡು ವಿಚಾರಣೆಯ ಸಮಯದಲ್ಲಿ ಇವರ ದೀರ್ಘಕಾಲದ ಗೈರುಹಾಜರಿ ಅಂದರೆ ದಿನಾಂಕ:15.12.1997 ರಿಂದ 12.05.2004ರವರೆಗೆ ಒಟ್ಟು 2705 (7years 5months) ದಿನಗಳಿಗೆ ಯಾವುದೇ ಸಕಾರಣವನ್ನು ದಾಖಲಾತಿಗಳ ಮೂಲಕ ಅಥವಾ ಸಾಕ್ಷಿಗಳ ಮುಖಾಂತರ ನೀಡಿರುವುದಿಲ್ಲ. ಅಲ್ಲದೇ ವಿಚಾರಣೆಯ ನಂತರ ಪ್ರತಿವಾದವನ್ನು

ಸಹ ಸಲ್ಲಿಸಿರುವುದಿಲ್ಲವೆಂದು ವಿಚಾರಣೆಯಲ್ಲಿ ಬಂದ ಸಾಕ್ಷಿಗಳ ಹೇಳಿಕೆ ಹಾಗೂ ಪ್ರದರ್ಶಿತ ದಾಖಲೆಗಳಿಂದ ಸದರಿ ನೌಕರರ ದೀರ್ಘಕಾಲದ ಅನಧಿಕೃತ ಗೈರುಹಾಜರಿಯು ರುಜುವಾತಾಗಿದ್ದು ಇದು ನೌಕರರ ಕರ್ತವ್ಯ ನಿರ್ಲಕ್ಷತೆಯಾಗಿದೆಯೆಂದು ವಿಚಾರಣಾಧಿಕಾರಿಗಳು ಆಪಾದನೆಗಳು ರುಜುವಾತು ಆಗಿರುತ್ತವೆ ಎಂದು ಫಲಿತಾಂಶವನ್ನು ನೀಡಲು ಕಾರಣಗಳನ್ನು ನೀಡಿರುತ್ತಾರೆ.

**ವಿಚಾರಣೆಯ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ಈ ಕೆಳಕಂಡ ಅಂಶಗಳು ಶಿಸ್ತುಪ್ರಾಧಿಕಾರಿಯ ಗಮನಕ್ಕೆ ಬಂದಿರುತ್ತದೆ.**

1) ಆಪಾದಿತ ನೌಕರರು ವಿಚಾರಣೆಯ ಸಮಯದಲ್ಲಿ ವಿಚಾರಣಾ ಪ್ರಾಧಿಕಾರಿಯ ಮುಂದೆ ಯಾವುದೇ ಸಾಕ್ಷ್ಯದಾಖಲಾತಿಗಳನ್ನು ಸಲ್ಲಿಸದೆ ಪ್ರತ್ಯೇಕವಾಗಿ ಶಿಸ್ತುಪ್ರಾಧಿಕಾರಿಯ ಕಛೇರಿಗೆ ಕೆಲವು ಪತ್ರವ್ಯವಹರಿಸಿದ್ದು ಕಂಡುಬಂದಿರುತ್ತದೆ. ಆ ಪ್ರಕಾರ ಈ ನೌಕರರು ಇವರ ಆರೋಗ್ಯ ಸರಿಯಿಲ್ಲದೆ Optio Athytis ಕಾಯಿಲೆಯಿಂದ ದಿನಾಂಕ:01.02.2002 ರಿಂದ 12.05.2004 ರವರಗೆ ಒಟ್ಟು 832 (2years 3 months &12days) ದಿನಗಳವರೆಗೆ ಅನಾರೋಗ್ಯದಿಂದ ಬಳಲಿರುವ ಬಗ್ಗೆ ಮಾಸೂರಿನ ಸರ್ಕಾರಿ ವೈದ್ಯಾಧಿಕಾರಿಗಳಿಂದ ಮಾಹಿತಿಯನ್ನು ಪಡೆದು ದೃಢಪಡಿಸಿಕೊಳ್ಳಲಾಗಿದ್ದು ಈ ಅವಧಿಯ ಗೈರುಹಾಜರಿಯ ಸಂಬಂಧವಾಗಿ ಸಾಂದಾರ್ಭಿಕ ಸಾಕ್ಷ್ಯಾಧಾರಗಳಿಂದ ಒಪ್ಪಿಕೊಳ್ಳಬಹುದಾಗಿದ್ದು ಅನಾರೋಗ್ಯದ ಪೂರ್ವದಲ್ಲಿಯ ದಿನಾಂಕ:15.12.1997 ರಿಂದ 31.01.2002 ರವರೆಗೆ ಒಟ್ಟು 1508 (4years 1 months & 18 days) ದಿನಗಳವರೆಗಿನ ದೀರ್ಘಕಾಲದ ಅನಧೀಕೃತ ಗೈರುಹಾಜರಿಯ ಅವಧಿಯಲ್ಲಿ ಆಪಾದಿತ ನೌಕರನು ಆರೋಗ್ಯದಿಂದಿದ್ದು ಅವರ ತಂದೆ, ತಾಯಿ ಮತ್ತು ಮಗಳು ಮರಣಹೊಂದಿದ ಬಗ್ಗೆ ಮಾನಸಿಕ ನೋವು ಉಂಟಾದ ಕಾರಣ ಕೆಲಸಕ್ಕೆ ಹಾಜರಾಗಲಿಲ್ಲವೆಂದು ವಿವರಿಸಿರುತ್ತಾರೆ.

2) ಆಪಾದಿತ ನೌಕರರಿಗೆ ರಜೆಯ ತೀರ ಅವಶ್ಯಕತೆಯಿದ್ದರೆ Karnataka Civil Service, Rule-175(1) ರ ಅನ್ವಯ ರಜಾ ಅರ್ಜಿ ಪ್ರಪತ್ರವನ್ನು ಅವರ ನಿಯಂತ್ರಣಾಧಿಕಾರಿಗಳಿಗೆ ಒಪ್ಪಿಸಿ ಸೂಕ್ತ ಮಂಜೂರಾತಿಯನ್ನು ಪಡೆದುಕೊಳ್ಳಬಹುದಾಗಿತ್ತು. ಇವರು ಮಾನಸಿಕ ಅಸ್ವಸ್ಥತೆಯ ಬಗ್ಗೆ ಯಾವುದೇ ಅಧೀಕೃತ ವೈದ್ಯಾಧಿಕಾರಿಗಳಿಂದ ಪ್ರಮಾಣಿಕೃತ ಪತ್ರಗಳನ್ನು ಪಡೆದು ವಿಚಾರಣೆಯ ಸಮಯದಲ್ಲಿ ಹಾಜರು ಪಡಿಸಿರುವುದಿಲ್ಲ ಇವರು 1508 (4years 1months & 18 days) ದಿನಗಳು ಅಸ್ವಸ್ಥತೆಯಿಂದ ಇದ್ದರು ಎಂಬುದು ಸುಳ್ಳಿನಿಂದ ಕೂಡಿದ ಸಂಗತಿಯಾಗಿರುತ್ತದೆ. ಏಕೆಂದರೆ ಇಷ್ಟು ದೀರ್ಘಕಾಲದಲ್ಲಿ ಒಂದು ದಿನವಾದರು ಅವರ ಪತ್ನಿಯಾಗಲಿ ಅವರ ನಿಕಟ ಸಂಬಂಧಿಗಳಾಗಲೀ ಕಾರ್ಗಲ್ ವಲಯ ಕಛೇರಿಗೆ ಅಥವಾ ಇಲಾಖೆಯ ಕೇಂದ್ರ ಕಛೇರಿಗಾಗಲಿ ಸಂಪರ್ಕಿಸಿದ್ದಾಗಲಿ ಅಥವಾ ಈ ಬಗ್ಗೆ ವಿಷಯ ತಿಳಿಸಲು ಪ್ರಯತ್ನಿಸಿದ್ದಾಗಲಿ ಮಾಡಿರುವುದಿಲ್ಲ ಇದಕ್ಕೆ ಬದಲಾಗಿ ಇಲಾಖೆಯ ವತಿಯಿಂದಲೇ ಸದರಿ ಆಪಾದಿತ ನೌಕರರಿಗೆ ಕರ್ತವ್ಯಕ್ಕೆ ಮರಳುವಂತೆ ಮಾಡಿದ ಎಲ್ಲಾ ಪ್ರಯತ್ನಗಳು ಫಲಕಾರಿಯಾಗದ ಕಾರಣ ಅಂತಿಮ ಕ್ರಮವಾಗಿ ಅಂತಿಮ ತಿಳುವಳಿಕೆ ಪತ್ರವನ್ನು 1957 KCS (Classification, Control and Appeal) Rule-28A(d)ರ ಅನ್ವಯ ಸಾಗರ ವಾರ್ತಾ ಪತ್ರಿಕೆ ಮತ್ತು ವಿಜಯ ಕರ್ನಾಟಕ ದಿನ ಪತ್ರಿಕೆಗಳಲ್ಲಿ ಕ್ರಮವಾಗಿ ದಿನಾಂಕ:06.05.2004 ಮತ್ತು 07.05.2004ರಂದು ಪ್ರಕಟಿಸಲಾಗಿ ಸದರಿ ಆಪಾದಿತ ನೌಕರರು ದಿನಾಂಕ:13.05.2004ರಂದು ವಿಭಾಗ ಕಛೇರಿಯಲ್ಲಿ ಕರ್ತವ್ಯದ ಮೇಲೆ ಹಾಜರಾಗಿರುತ್ತಾರೆ. ಸದರಿ ಆಪಾದಿತ ನೌಕರರ ವಿರುದ್ಧ ಶಿಸ್ತು ಕ್ರಮವನ್ನು ತೆಗೆದುಕೊಂಡು ಕೆಲಸದ ಮೇಲೆ ತೆಗೆದು ಹಾಕದಿದ್ದ ಕಾರಣ ಸರ್ಕಾರದ ಆದೇಶ ಕ್ರ:ಸಿಆಸುಇ-4-ಸೇಇವಿ/ 89 ದಿನಾಂಕ:31.01.1989ರ ಕಂಡಿಕೆ(3)ರ ಅನುಸಾರ ಸದರಿ ನೌಕರರಿಗೆ ಕೆಲಸದ ಮೇಲೆ ತೆಗೆದುಕೊಳ್ಳಲಾಗಿರುತ್ತದೆ. ಸದರಿ ಆಪಾದಿತ ನೌಕರನು ದಿನಾಂಕ:15.12.1997 ಕ್ಕಿಂತ ಪೂರ್ವದಲ್ಲಿ ದಿನಾಂಕ:01.06.1995 ರಿಂದ 11.06.1995 ಹಾಗೂ 18.06.1995 ರಿಂದ 29.06.1995 ರವರೆಗೆ ಒಟ್ಟು 23 ದಿನಗಳು ಗೈರುಹಾಜರಾಗಿದ್ದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಶಿಕಾರಿಪುರ ಉಪ ವಿಭಾಗ, ಶಿಕಾರಿಪುರ ಇವರ ಕಛೇರಿ ಆದೇಶ ಕ್ರ:282/ 95-96 ದಿನಾಂಕ:24.07.1995ರ ಮೂಲಕ ಸದರಿ ಗೈರುಹಾಜರಿ ಅವಧಿಯನ್ನು Leave without allowanceಯೆಂದು ಪರಿಗಣಿಸಲಾಗಿದೆ. ಮತ್ತು ನಂತರ ದಿನಾಂಕ:01.07.1995 ರಿಂದ 28.08.1995ರವರೆಗೆ ಒಟ್ಟು 57 ದಿನಗಳ ಗೈರುಹಾಜರಿಯನ್ನು ಈ ಕಛೇರಿಯ ಆದೇಶ ಕ್ರ:129/97-98 ದಿನಾಂಕ:23.01.1998ರ ಮೂಲಕ Leave without allowance ಯೆಂದು ಪರಿಗಣಿಸಿ ಈ ನೌಕರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಖಾಯಂ ಆಗಿ ನಿಲುಗಡೆಗೊಳಿಸಿದೆ. ಈ ಮಾಹಿತಿಯನ್ನು ಇವರ ಸೇವಾಪುಸ್ತಕದಿಂದ ವ್ಯಕ್ತವಾಗಿದ್ದು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನರಸಿಂಹರಾಜು ವಿರುದ್ಧ ರಾಜ್ಯ ಪ್ರಕರಣದಲ್ಲಿ (KSLJ 821/93) ಪುನಃ ಗೈರುಹಾಜರಾಗುವ ಸರ್ಕಾರಿ ನೌಕರರನೊಬ್ಬನ ಪ್ರಕರಣದಲ್ಲಿ ಅಂತಹ ಗೈರು ಹಾಜರಿಯು ಅರ್ಜಿದಾರನು ಸೇವೆಗೆ ಸೂಕ್ತನಲ್ಲವೆಂದು ಪರಿಗಣಿಸಲು ಉತ್ತಮ ಆಧಾರವಾಗುತ್ತದೆಂದು ತೀರ್ಪು ನೀಡಿದೆ. ಈ ತೀರ್ಪು ಸರ್ವೋಚ್ಛ ನ್ಯಾಯಾಲಯವು ಸಂಶೇರ್ ಸಿಂಘ್ ವಿರುದ್ಧ ಪಂಜಾಬ್ ರಾಜ್ಯ (1974(2) SCC N.31) ಪ್ರಕರಣದಲ್ಲಿ ನೀಡಿರುವ ತೀರ್ಪಿನಿಂದ ಬೆಂಬಲವನ್ನು ಪಡೆದಿರುತ್ತದೆ. ಈ ಪ್ರಕರಣದಲ್ಲೂ ಸಹ ಸದರಿ ಆಪಾದಿತ ನೌಕರರು ಸಹ ಪದೇ ಪದೇ ಕೆಲಸದಲ್ಲಿ ಗೈರುಹಾಜರಾಗಿದ್ದು ಸದರಿ ಆಪಾದನೆಗಳು ರುಜುವಾತಾಗಿರುತ್ತವೆ. ಅಲ್ಲದೇ, ಈ ನೌಕರರು ದಿನಾಂಕ:06.05.1976ರಂದು ಅರಣ್ಯರಕ್ಷಕರಾಗಿ ಕರ್ತವ್ಯಕ್ಕೆ ಸೇರಿದ್ದು ಈ ದಿನಾಂಕದವರೆಗೂ ಸದರಿ ಆಪಾದಿತ ನೌಕರರ ಪರಿವೀಕ್ಷಣಾ ಅವಧಿಯು KCS (Probation) Rule-12(1)(3)ನ್ನು 5(1)(a)ರ ಜೊತೆಗೆ ಓದಿಕೊಂಡಂತೆ ತೃಪ್ತಿಕರವೆಂದು ಘೋಷಣೆಯಾಗಿರುವುದಿಲ್ಲ ಇವರ ಅನಧೀಕೃತ ಗೈರುಹಾಜರಾತಿಯಿಂದ ಇವರನ್ನು ಇಲಾಖೆಯಲ್ಲಿ ಯಾವ ಉದ್ದೇಶಕ್ಕೆ ನೇಮಿಸಿಕೊಳ್ಳಲಾಗಿತ್ತೋ, ಆ ಉದ್ದೇಶ ಸಫಲವಾಗಿಲ್ಲ ಆದ್ದರಿಂದ ಇವರು ಹೊಂದಿರುವ ಅರಣ್ಯರಕ್ಷಕ ಹುದ್ದೆಯಲ್ಲಿ ಮುಂದುವರೆಯಲು ಆಸಕ್ತಿ ಹೊಂದಿಲ್ಲ ಎಂಬುದು ಸಹ ಸ್ಪಷ್ಟವಾಗಿದೆ. ಹಾಗೂ ಖಾಯಂ ಪೂರ್ವ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿಲ್ಲವೆಂಬುದನ್ನು ಪರಿಗಣಿಸಿ ಅವರು ಸೇವೆಯಲ್ಲಿ ಮುಂದುವರಿಯಲು ಅರ್ಹರಲ್ಲವಾದ್ದರಿಂದ KCS (Probation) Rule-6(1) ರನ್ವಯ ಸೇವೆಯಿಂದ ವಿಮೋಚನೆಗೊಳ್ಳಲು ಕಾರಣರಾದ ಹಿನ್ನೆಲೆಯಲ್ಲಿ ಈ ನೌಕರರ ದಿನಾಂಕ:15.12.1997 ರಿಂದ 31.01.2002 ರವರೆಗೆ ಒಟ್ಟು 1508 (4years 1months & 18days) ದಿನಗಳವರೆಗಿನ ದೀರ್ಘಕಾಲದ ಅನಧೀಕೃತ ಗೈರುಹಾಜರಿಯು ನಿಸ್ಸಂದೇಹವಾಗಿ ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. ಮೇಲೆ ವಿವರಿಸಿದಂತೆ ಆಪಾದಿತ ಸರ್ಕಾರಿ ನೌಕರರ ಮೇಲೆ ಹೊರಿಸಲಾಗಿರುವ ಆರೋಪವು ಸಾಬೀತಾಗಿದ್ದು ತೀವ್ರತರವಾದ ದುರ್ನಡತೆಯಾಗಿದ್ದು Karnataka Civil Service Rule-108 ರ ಪ್ರಕಾರ ನಾಲ್ಕು ತಿಂಗಳು ಅಥವಾ ಅದಕ್ಕೂ ಹೆಚ್ಚು ಅವಧಿಯವರೆಗೆ ಕರ್ತವ್ಯದಿಂದ ಗೈರುಹಾಜರಾದರೆ ಅಂತಹ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಬಹುದಾಗಿದೆ ಅಥವಾ ತೆಗೆದು ಹಾಕಬಹುದಾಗಿದೆ. ಆಪಾದಿತ ನೌಕರರು ವಿಚಾರಣೆಯಲ್ಲಿ ಮತ್ತು ಉಲ್ಲೇಖ(6)ರ ರಕ್ಷಣಾ ಹೇಳಿಕೆಯಲ್ಲಿ ಪ್ರತಿಪಾದಿಸಿರುವ ವಿವಾದಾಂಶಗಳು ಪರಿಗಣನೆಗೆ ಅರ್ಹವಲ್ಲ. ಅವರ ಮೇಲಿನ ರುಜುವಾತಾಗಿರುವ ಆರೋಪಗಳು ಸಾಕ್ಷ್ಯಧಾರ ಸಹಿತವಾಗಿರುತ್ತವೆ. ಇಲಾಖಾ ವಿಚಾರಣೆಯಲ್ಲಿ ಆರೋಪವನ್ನು ರುಜುವಾತುಪಡಿಸಲು ಸಂಶಯಾತೀತವಾದ ಸಾಕ್ಷ್ಯಧಾರಗಳೇನು ಬೇಕಾಗಿರುವುದಿಲ್ಲ. ಅದರ ಬದಲಿಗೆ

ಘಟನೆಯ ನಡೆದಿರಲು ಸಾಧ್ಯತೆಗಳು ಪ್ರಧಾನವಾಗಿದ್ದಲ್ಲಿ ಹಾಗೂ ಮುಖ್ಯ ವಸ್ತು ವಿಷಯಗಳು ಮತ್ತು ಸಾಂದರ್ಭಿಕ ಸನ್ನಿವೇಶಗಳು ಆರೋಪಗಳ ರುಜುವಾತಿಗೆ ಸಾಕಾಗುತ್ತವೆ. ಈ ಪ್ರಕರಣದಲ್ಲಿ ಶ್ರೀ ಎಂ.ಮಧುಕರ ಅರಣ್ಯರಕ್ಷಕ ಇವರು ಸುಮಾರು ನಾಲ್ಕು ವರ್ಷಕ್ಕಿಂತಲೂ ಹೆಚ್ಚಿನ ಅವಧಿಗೆ ಅನಧೀಕೃತ ಗೈರು ಹಾಜರಾಗಿರುವುದರಿಂದ ಆಪಾದಿತ ನೌಕರರ ಮೇಲಿನ ರುಜುವಾತಾದ ಆಪಾದನೆಗಳ ದುರ್ನಡತೆಗೆ Karnataka Civil Service, Rule-108 ನ್ನು ಓದಿಕೊಂಡಂತೆ, ಸದರಿ ಆಪಾದಿತ ಸರ್ಕಾರಿ ನೌಕರರ ವಿರುದ್ಧ ಸಾಬೀತಾಗಿರುವ ಆರೋಪಗಳ ತೀವ್ರತೆಗನುಗುಣವಾಗಿ ಇವರಿಗೆ 1957ರ KCS (CCA) Rule-8ರ ಅನ್ವಯ ಪ್ರಧಾನ ದಂಡನೆಯನ್ನು ವಿಧಿಸಲು ನಿರ್ಧರಿಸಲಾಗಿದೆ.

ಆದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ 1957ರ KCS (Classification, Control and Appeal) Rule-11 ಮತ್ತು 11A ರೊಡನೆ ಓದಿಕೊಂಡಂತೆ ಅದೇ ನಿಯಮಗಳ ನಿಯಮ-9(3) (c) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ. ಜಯರಾಮಯ್ಯ ಭಾ, ಅ.ಸೇ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಆದ ನಾನು ಶ್ರೀ ಎಂ. ಮಧುಕರ ಅರಣ್ಯರಕ್ಷಕ ಇವರನ್ನು KCS (CCA) Rule-8(viii) ರನ್ವಯ ಮುಂದಿನ ನಿಯೋಜನೆಗೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಸೇವೆಯಿಂದ (Dismissal from service) ತೆಗೆದುಹಾಕುವ ದಂಡನೆಯನ್ನು ವಿಧಿಸಿರುತ್ತೇನೆ.

ಸದರಿ ನೌಕರರ ದಿನಾಂಕ:15.12.1997 ರಿಂದ 31.01.2002 ರವರೆಗೆ ಒಟ್ಟು 1508 (4years 1 months & 18 days) ದಿನಗಳವರೆಗಿನ ದೀರ್ಘಕಾಲದ ಅನಧೀಕೃತ ಗೈರುಹಾಜರಿಯ ಅವಧಿಯನ್ನು Karnataka Civil Service Rule-106A ಹಾಗೂ Rule-8(14A) ಅನ್ವಯ ಲೆಕ್ಕಕ್ಕಿಲ್ಲದ ಅವಧಿ (Dies-non service) ಎಂದು ಪರಿಗಣಿಸಿ ಆದೇಶಿಸಿದೆ.

ಹಾಗೂ Karnataka Civil Service Rule-252(A) ರನ್ವಯ ಈ ಆದೇಶವು ಆಪಾದಿತ ಸರ್ಕಾರಿ ನೌಕರರಿಗೆ ಜಾರಿ ಮಾಡಲ್ಪಡುವ ದಿನಾಂಕದ ಅಥವಾ ಈ ಆದೇಶವು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದ (ಯಾವುದು ಮೊದಲೋ ಆ ದಿನಾಂಕ) ತಕ್ಷಣದ ಹಿಂದಿನ ದಿನಾಂಕದವರೆಗೆ ನೌಕರರು ಈ ಹಿಂದೆ ಗಳಿಸಿದ ಸಂಪೂರ್ಣ ಹಿಂದಿನ ಸೇವೆಯ ಪರಿಗಣನೆಗೆ ಹಕ್ಕುಳ್ಳವರಾಗಿರುವುದಿಲ್ಲ.

ಈ ಆದೇಶದ ಮುಖ್ಯಾಂಶವನ್ನು ನೌಕರರ ಸೇವಾಪುಸ್ತಕದ ಭಾಗ-IV ರಲ್ಲಿ ಕೆಂಪು ಶಾಹಿಯಲ್ಲಿ ದಾಖಲುಪಡಿಸತಕ್ಕದ್ದು.

**ಜಿ. ಜಯರಾಮಯ್ಯ ಭಾ.ಅ.ಸೇ.**
ನೇಮಕಾತಿ ಮತ್ತು ಶಿಸ್ತುಪ್ರಾಧಿಕಾರಿ
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ಅರಣ್ಯ ವಿಭಾಗ, ಸಾಗರ.

ಪಿ.ಆರ್.1464

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ,**
**ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ**

**ಪ್ರಕರಣ ಸಂಖ್ಯೆ: ಸಕಾಆದಾ: ಕಾನಪ: ಡಿವಿಜಿ:ಸಿಆರ್-175/ 2006, ದಿನಾಂಕ:25ನೇ ಸೆಪ್ಟೆಂಬರ್, 2006**

**ಅರ್ಜಿದಾರರು**

1) ಮಹಾಬುನ್ನಿ ಕೋಂ ಲೇಟ್ @ ಸಫಿ ಸಫಿಉಲ್ಲಾ.
2) ಶ್ರೀ ಇಬ್ರಾಹಿಂ ಬಿನ್ ಬಿ. ಕಾಸಿಂಸಾಬ್
ವಾಸ: ವಿಜಯ ಸರ್ಕಲ್, ಸಂಡೂರು, ಬಳ್ಳಾರಿ ಜಿಲ್ಲೆ.

**ಪ್ರತಿವಾದಿಗಳು:**

1) ಶ್ರೀ ಕಾಸೀಂ ಪೀರಾ ಬಿನ್ ಮೆಹಬೂಬ್ ಸಾಬ್,
ವಾಸ: ಮನೆ.ನಂ.96, ಕಂಟ್ರಾಕ್ಟರ್ ದರಗ ಮಸ್‌ಜೀದ್ ಹತ್ತಿರ, ಸಂಡೂರು, ಬಳ್ಳಾರಿ ಜಿಲ್ಲೆ.
2) ದಿ ಬ್ರಾಂಚ್ ಮ್ಯಾನೇಜರ್ ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಳ್ಳಾರಿ.
3) ಶ್ರೀ ಅಬ್ದುಲ್ ಖಲೀಮ್ ಆಜಾದ್ ಬಿನ್ ಅಬ್ದುಲ್ ರಶೀದ್ ಸಾಬ್ ವಿ.ಎಸ್.ಎಸ್.ಎನ್. ಚೋರ್‌ನೂರ್ ವಡೇರ ಹಳ್ಳಿ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.

**ಪ್ರಕರಣೆ**

ಶ್ರೀ:ಶ್ರೀಮತಿ ಮಹಾಬುನ್ನಿ, ಇಬ್ರಾಹಿಂ ಇವರು ಮೃತ ಸಫಿ @ ಸಫಿಉಲ್ಲಾ ಇವರ ಹೆಂಡತಿ ಮತ್ತು ತಂದೆ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಫಿ @ ಸಫಿಉಲ್ಲಾ ರವರು ಒಂದನೇ ಪ್ರತಿವಾದಿಗಳಾದ ಶ್ರೀ ಕಾಸಿಂ ಪೀರಾ ಇವರ ವೆಯಿಕಲ್ ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದಾರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಯಲದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಲ್ಯಾಣರಾವ್ ಬಿ. ಗೌಡೆ**
ಸಹಾಯಕ ಕಾರ್ಮಿಕ ಆಯುಕ್ತರು
ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.1486

**GOVERNMENT OF KARNATAKA,**
**DIRECTORATE OF ECONOMICS AND STATISTICS, BANGALORE-1.**
**Consumer Price Index Numbers For Industrial Workers**

No. DES 23 PWX 2005 Month: July, 2006

State: Karnataka Base: 1987-88=100 Date : 27-09-2006

| Group/Sub-Group | | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** (a) Cereals & Products | 383 | 419 | 397 | 374 | 374 | 362 | 365 | 365 | 277 | 338 | 344 |
| | (b) Pulses & Products | 329 | 370 | 402 | 473 | 324 | 388 | 401 | 411 | 405 | 359 | 353 |
| | (c) Oil & Fats | 250 | 260 | 245 | 258 | 244 | 251 | 258 | 280 | 230 | 244 | 253 |
| | (d) Meat, Fish & Eggs | 390 | 383 | 370 | 516 | 412 | 389 | 356 | 386 | 605 | 476 | 367 |
| | (e) Milk & Products | 346 | 282 | 336 | 325 | 306 | 303 | 258 | 342 | 289 | 307 | 281 |
| | (f) Condiments & Spices | 266 | 355 | 381 | 403 | 309 | 296 | 308 | 266 | 287 | 304 | 305 |
| | (g) Vegetables & Fruits | 263 | 264 | 405 | 413 | 325 | 295 | 309 | 320 | 317 | 243 | 394 |
| | (h) Other Food | 297 | 403 | 380 | 363 | 347 | 317 | 337 | 321 | 288 | 337 | 351 |
| | **FOOD GROUP INDEX** | **333** | **364** | **375** | **382** | **339** | **330** | **333** | **350** | **341** | **331** | **333** |
| II. | Pan, Supari, Tobacco & Intoxicants | 323 | 353 | 385 | 330 | 395 | 476 | 373 | 480 | 291 | 378 | 382 |
| III. | Fuel & Light | 374 | 325 | 326 | 460 | 311 | 326 | 352 | 333 | 277 | 481 | 288 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 256 | 255 | 229 | 375 | 269 | 266 | 349 | 382 | 242 | 437 | 214 |
| VI. | **MISCELLANEOUS:** (a) Medical Care | 628 | 498 | 390 | 291 | 295 | 268 | 386 | 324 | 361 | 394 | 216 |
| | (b) Education, Recreation & Amusement | 364 | 352 | 517 | 221 | 391 | 483 | 347 | 299 | 434 | 350 | 326 |
| | (c) Transport & Communication | 416 | 426 | 342 | 719 | 595 | 409 | 400 | 567 | 608 | 390 | 440 |
| | (d) Personal Care & effects | 268 | 288 | 263 | 267 | 290 | 251 | 298 | 295 | 272 | 263 | 273 |
| | (e) Others Miscellaneous Group | 352<br>391 | 368<br>359 | 288<br>340 | 444<br>349 | 312<br>349 | 273<br>324 | 272<br>329 | 288<br>310 | 240<br>372 | 466<br>373 | 243<br>285 |
| | **GENERAL INDEX** | **312** | **320** | **320** | **354** | **303** | **297** | **310** | **321** | **307** | **335** | **272** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **…** | **…** |

for Director.
Directorate of Economics and Statistics,
Government of Karnataka,
Bangalore.

**Government of India,**
**Ministry of Labour (Labour Bureau)**
**No. 112/1(KTK)/2006-NCPI**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: July, 2006

| Code | Group/Sub-group/ Centre | Bangalore | Belgaum | Hubli-Dharwar | Mercara | Mysore |
|---|---|---|---|---|---|---|
| | 1 | 2 | 3 | 4 | 5 | 6 |
| 1000 | **I A:FOOD:** | | | | | |
| 1100 | (a) Cereals & Products | 119 | 116 | 123 | 105 | 120 |
| 1200 | (b) Pulses & Products | 124 | 122 | 127 | 121 | 124 |
| 1300 | (c) Oils & Fats | 135 | 134 | 130 | 141 | 123 |
| 1400 | (d) Meat, Fish & Eggs | 133 | 147 | 139 | 115 | 126 |
| 1500 | (e) Milk & Products | 118 | 119 | 97 | 116 | 122 |
| 1600 | (f) Condiments & Spices | 113 | 110 | 112 | 108 | 125 |
| 1700 | (g) Vegetables & Fruits | 120 | 161 | 137 | 131 | 109 |
| 1800 | (h) Other Food | 125 | 123 | 120 | 126 | 121 |
| 1000 | **I-A FOOD GROUP** | 122 | 125 | 122 | 116 | 120 |
| 2000 | I-Pan, Supari, Tobacco & Intoxicants | 116 | 110 | 115 | 104 | 117 |
| 3000 | II-Fuel & Light | 141 | 142 | 123 | 104 | 147 |
| 4000 | III-Housing Index | 124 | 112 | 121 | 104 | 117 |
| 5000 | IV-Clothing, Bedding & Footwear | 100 | 113 | 116 | 113 | 108 |
| 6000 | **V-Miscellaneous:** | | | | | |
| 6100 | (a) Medical Care | 129 | 128 | 114 | 122 | 123 |
| 6200 | (b) Education, Recreation & Amusement | 125 | 117 | 119 | 129 | 107 |
| 6300 | (c) Transport & Communication | 154 | 184 | 180 | 152 | 160 |
| 6400 | (d) Personal Care & effects | 114 | 119 | 117 | 113 | 114 |
| 6500 | (e) Others | 109 | 111 | 114 | 113 | 135 |
| 6600 | Miscellaneous Group | 131 | 132 | 129 | 126 | 127 |
| | **GENERAL INDEX** | **124** | **126** | **123** | **114** | **123** |

for Director.
Directorate of Economics and Statistics,
Government of Karnataka,
Bangalore.

PR-1468

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದ ಸರ್ವೆ ನಂ.63 ರಲ್ಲಿ 2.03 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ಶ್ರೀ ಎಸ್.ಎಸ್. ಮಹೇಂದ್ರ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 352 ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ: ಸಿ.ಐ.73 ಎಂ.ಎಂ.ಎನ್. 2006 ದಿನಾಂಕ:18.08.2006.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದ ಸರ್ವೆ ನಂ.63 ರಲ್ಲಿ 2.03 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 352 ರ ಗುತ್ತಿಗೆಯನ್ನು ಶ್ರೀ ಎಸ್.ಎಸ್. ಮಹೇಂದ್ರ ರವರ ಹೆಸರಿನಲ್ಲಿ ದಿನಾಂಕ:21.07.2000 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕದಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಆದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಗಭೂಇ: ಕಗಗು:352: 2006-07/ 7890, ದಿನಾಂಕ:26ನೇ ಸೆಪ್ಟೆಂಬರ್, 2006**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:28.07.2005ರಲ್ಲಿ ನಿರ್ದೇಶಿಸಿರುವಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದ ಸರ್ವೆ ನಂ.63ರಲ್ಲಿ 2.03 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 352 ರ ಗುತ್ತಿಗೆಯನ್ನು ಶ್ರೀ ಎಸ್.ಎಸ್. ಮಹೇಂದ್ರ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 352ರ ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ:05.04.2005ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ಬೆಂಗಳೂರು.

ಪಿ.ಆರ್.1469

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು, ಇವರ ನಡವಳಿ**

**ಸಂಖ್ಯೆ: ಸಿಬ್ಬಂದಿ. ಶಿಸ್ತು ಟ್ರಾಪ್:2:2002-03, ದಿನಾಂಕ:29ನೇ ಸೆಪ್ಟೆಂಬರ್, 2006**

**ವಿಷಯ:** ಶ್ರೀಮತಿ ಡಿ.ಎನ್. ಯಶೋಧಮ್ಮ ದ್ವಿತೀಯ ದರ್ಜೆ ಭೂಮಾಪಕರವರ ಟ್ರ್ಯಾಪ್ ಪ್ರಕರಣದಲ್ಲಿ ಆರೋಪವು ಸಾಬೀತಾದ ಹಿನ್ನೆಲೆಯಲ್ಲಿ-ಅಂತಿಮ ಆದೇಶಗೊಳಿಸುವ ಬಗ್ಗೆ.

**ಉಲ್ಲೇಖ:**
1) ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರದ ಸಂಖ್ಯೆ: ಲೋಕ್:ಐಎನ್‌ವಿ(ಜಿ) ಸಿಟಿ: ಕ್ರೈಂ.30: 2002, ದಿನಾಂಕ:18.09.2002.
2) ಈ ಕಛೇರಿ ನಡವಳಿ ಸಮಸಂಖ್ಯೆ ದಿನಾಂಕ:28.09.2002 ಮತ್ತು ದಿನಾಂಕ:09.10.2003.
3) ವಿಶೇಷ ನ್ಯಾಯಾಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ವಿಶೇಷ ಪ್ರ.ಸಂ.ಸಿ.ಸಿ.124:2004, ದಿನಾಂಕ:23.03.2006.
4) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ ಐಎನ್‌ವಿ (ಜಿ) ಸಿಟಿ ಕ್ರೈಂ.30:2002, ದಿನಾಂಕ:14.07.2006ನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರಿಗೆ ವಿಳಾಸಿಸಿ, ಈ ಕಛೇರಿಗೆ ಅದರ ಪ್ರತಿಯನ್ನು ಕಳುಹಿಸಿರುವುದು.
5) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9: ಸೇಇನಿ.95: ದಿನಾಂಕ:26.06.1996.

**ಪ್ರಸ್ತಾವನೆ:**

ಶ್ರೀಮತಿ ಡಿ.ಎನ್. ಯಶೋಧಮ್ಮ ದ್ವಿತೀಯ ದರ್ಜೆ ಭೂಮಾಪಕರು ಹಾಗೂ ಶ್ರೀ ಸೀತಾರಾಮಯ್ಯ, ಪರ್ಯಾವೇಕ್ಷಕರು ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿ ಪ್ರಕಾರ, ಶ್ರೀಮತಿ ಲತಾಮೂರ್ತಿ ಬ್ಯಾಗಡದೇನಹಳ್ಳಿ, ಯಂಗಾರೆಡ್ಡಿ ಬಿಲ್ಡಿಂಗ್, ಆನೇಕಲ್ ತಾಲ್ಲೂಕು, ಬೆಂಗಳೂರು ಇವರು ದಿನಾಂಕ: 05.09.2002 ರಂದು, ಆರಕ್ಷಕ ಉಪಾಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆ, ಬೆಂಗಳೂರು ಕಛೇರಿಯಲ್ಲಿ ಹಾಜರಾಗಿ ಶ್ರೀಮತಿ ಡಿ.ಎನ್. ಯಶೋಧಮ್ಮ ದ್ವಿತೀಯ ದರ್ಜೆ ಭೂಮಾಪಕರು, ಶ್ರೀ ಸೀತಾರಾಮಯ್ಯ, ಪರ್ಯಾವೇಕ್ಷಕರು ಇವರ ವಿರುದ್ಧ ದೂರು ನೀಡಿ ಬೆಂಗಳೂರು ಉತ್ತರ ತಾಲ್ಲೂಕಿನ ಯಲಹಂಕ ಹೋಬಳಿಯ ಮೇಡಿ ಅಗ್ರಹಾರದ ಸ. ನಂಬರ್ 1:1 ರಲ್ಲಿ 2-13 ಗುಂಟೆ ಜಮೀನನ್ನು ಮೋಜಣಿ ಮಾಡಲು ರೂ.4,000-00 ಗಳ ಲಂಚವನ್ನು ಕೇಳಿದರೆಂದೂ, ಬೆಂಗಳೂರು ನಗರ ಲೋಕಾಯುಕ್ತರು, ಟ್ರಾಪ್ ಮಾಡಿ ಇವರ ವಿರುದ್ಧ ಠಾಣೆ ಗುನ್ಹೆ ಸಂಖ್ಯೆ: 30: 2002ರಲ್ಲಿ ಕ್ರಿಮಿನಲ್ ಪ್ರಕರಣವನ್ನು ದಾಖಲಾಗಿರುತ್ತದೆ. ಈ ಕಛೇರಿ ನಡವಳಿ ದಿನಾಂಕ:28.09.2002ರ ಆದೇಶದಲ್ಲಿ ಸದರಿ ಆರೋಪಿತ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರು ಹೊಂದಿರುವ ಹುದ್ದೆಯ ಹಕ್ಕನ್ನು ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೋಲಾರ ಕಛೇರಿಗೆ ಹಾಗೂ ಪರ್ಯಾವೇಕ್ಷಕರ ಮೇಲಿನ ಹುದ್ದೆಯ ಹಕ್ಕನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿತ್ರದುರ್ಗ ಕಛೇರಿಗೆ ವರ್ಗಾಯಿಸಲಾಗಿರುತ್ತದೆ. ದಿನಾಂಕ:09.10.2003ರ ಆದೇಶದಲ್ಲಿ ಅಮಾನತ್ತಿನಿಂದ ತೆರವುಗೊಳಿಸಿ ಶ್ರೀಮತಿ ಯಶೋಧಮ್ಮ ದ್ವಿತೀಯ ದರ್ಜೆ ಭೂಮಾಪಕರವರನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೆ.ಐ.ಎ.ಡಿ.ಬಿ.(ಬಿ.ಎಂ.ಐ.ಸಿ.ಪಿ.) ಗಾಂಧಿನಗರ, ಬೆಂಗಳೂರು ಕಛೇರಿಗೆ ಹಾಗೂ ಶ್ರೀ ಸೀತಾರಾಮಯ್ಯ, ಪರ್ಯಾವೇಕ್ಷಕರು ಇವರನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿತ್ರದುರ್ಗ ಕಛೇರಿಗೆ ಪುನರ್ ನೇಮಕ ಮಾಡಿದಂತೆ ಕ್ರಮವಾಗಿ ದಿನಾಂಕ:16.10.2003ರ ಪೂರ್ವಾಹ್ನ ಹಾಗೂ 15.10.2003ರ ಪೂರ್ವಾಹ್ನ ಕೆಲಸಕ್ಕೆ ಹಾಜರಾಗಿರುತ್ತಾರೆ.

ಇವರ ವಿರುದ್ಧದ ಕ್ರಿಮಿನಲ್ ಪ್ರಕರಣವು ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದ ವಿಶೇಷ ಸಂಖ್ಯೆ: 124:2004, ದಿನಾಂಕ:23.03.2006ರಂದು ಶ್ರೀಮತಿ ಡಿ.ಎನ್. ಯಶೋಧಮ್ಮ ದ್ವಿತೀಯ ದರ್ಜೆ ಭೂಮಾಪಕರು ಇವರ ವಿರುದ್ಧ ಆರೋಪ ಸಾಬೀತಾಗಿದ್ದು, ಆರೋಪಿಗೆ 1988ರ ಲಂಚ ವಿರೋಧ ಕಾಯ್ದೆ ಕಲಂ 7ರಲ್ಲಿ ಮಾಡಿದ ಅಪರಾಧಕ್ಕಾಗಿ ಆರೋಪಿಗೆ 6 ತಿಂಗಳ ಶಿಕ್ಷೆ ಮತ್ತು ರೂ.5,000-00 ದಂಡ ವಿಧಿಸಿದ್ದು, ಪಾವತಿಸಲು ತಪ್ಪಿದಲ್ಲಿ ಹೆಚ್ಚಿನ ಒಂದು ತಿಂಗಳು ಸಾದಾ ಶಿಕ್ಷೆ ಮತ್ತು ಸದರಿ ಕಾಯ್ದೆ ಕಲಂ 13(1)ಡಿ ಸಹವಾಚ 13(2)ರ ಪ್ರಕಾರ ಮಾಡಿದ ಅಪರಾಧಕ್ಕಾಗಿ ಒಂದು ವರ್ಷ ಶಿಕ್ಷೆ ಮತ್ತು ರೂ.10,000-00 ಗಳ ದಂಡ ವಿಧಿಸಿದ್ದು, ಪಾವತಿಸಲು ತಪ್ಪಿದಲ್ಲಿ 3 ತಿಂಗಳ ಹೆಚ್ಚಿನ ಸಾದಾ ಶಿಕ್ಷೆ ವಿಧಿಸಿ ಈ ಎಲ್ಲಾ ಶಿಕ್ಷೆಗಳು ಒಂದಾದರ ಮೇಲೊಂದರಂತೆ ಜಾರಿಗೆ ಬರುವಂತೆ ತೀರ್ಪು ನೀಡಿರುತ್ತಾರೆ. ಹಾಗೂ ಶ್ರೀ ಸೀತಾರಾಮಯ್ಯ, ಪರ್ಯಾವೇಕ್ಷಕರನ್ನು ನಿರ್ದೋಷಿಯೆಂದು ತೀರ್ಪು ನೀಡಿರುತ್ತಾರೆ.

ಉಲ್ಲೇಖ (4)ರಲ್ಲಿ ಶ್ರೀಮತಿ ಡಿ.ಎನ್. ಯಶೋಧಮ್ಮ ದ್ವಿತೀಯ ದರ್ಜೆ ಭೂ ಮಾಪಕರವರು ತಪ್ಪಿತಸ್ಥರೆಂದು ತೀರ್ಪು ನೀಡಿರುವ ಅಂಶವನ್ನು ಉಲ್ಲೇಖಿಸಿ, ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳವರಿಗೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರವರಿಗೆ ಪತ್ರ ಬರೆದಿರುತ್ತಾರೆ.

ಆರೋಪಿತ ನೌಕರರು, ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಸದರಿ ತೀರ್ಪಿನ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿದ್ದು, ಕ್ರಿಮಿನಲ್ ಅಪೀಲು ನಂ.713:2006, ದಿನಾಂಕ:29.03.2006ರಲ್ಲಿ ಸತ್ರ ನ್ಯಾಯಾಲಯವು ವಿಧಿಸಿರುವ ಶಿಕ್ಷೆಯನ್ನು ಮೇಲ್ಮನವಿ ಇತ್ಯರ್ಥವಾಗುವವರೆಗೆ ಹಾಗೂ ಮೇಲ್ಮನವಿದಾರರು 1 ಲಕ್ಷ ರೂ. ಬಾಂಡನ್ನು ಜಾಮೀನುದಾರರೊಂದಿಗೆ ಸಲ್ಲಿಸುವ ನಿಬಂಧನೆಗೊಳಪಟ್ಟು ತಡೆಯಾಜ್ಞೆ ನೀಡಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇನಿ 95: ದಿನಾಂಕ:26.06.1996 ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(1) ರನುಸಾರ ಸದರಿ ನಿಯಮಗಳು ನಿಯಮ 11, 12 ಮತ್ತು 13ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಿಸಿದ್ದಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆಗೆ ಒಳಪಡಿಸದೆಯೇ, ಸೇವೆಯಿಂದ ವಜಾ ಮಾಡುವ ಅಥವಾ ತೆಗೆದು ಹಾಕುರ ದಂಡನೆಯನ್ನು ವಿಧಿಸಬಹುದಾಗಿದೆ ಎಂದು ಆಕಸ್ಮಾತ್ ಅಪೀಲಿನಲ್ಲಿ ಆಪಾದಿತ ನೌಕರರು ಖುಲಾಸೆಯಾದಲ್ಲಿ ಅವರನ್ನು ಮತ್ತೆ ಕೆಲಸಕ್ಕೆ ತೆಗೆದುಕೊಂಡು ವಜಾಗೊಳಿಸಿದ ಆದೇಶ ಆಗದೇ ಇದ್ದಲ್ಲಿ ಲಭ್ಯವಾಗಬಹುದಾದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂದು, ಸರ್ಕಾರದ ಸುತ್ತೋಲೆಯ ಅಂಶವನ್ನು ಪರಿಗಣಿಸಿ, ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ದಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆಗೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವ ಬಗ್ಗೆ ಅಭಿಪ್ರಾಯ ಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದಲ್ಲಿ ಡಾ: ಬಾಬುರಾವ್ ಮುಡಬಿ, ಭಾ.ಆ.ಸೇ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು 1957ರ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9(3)ರಲ್ಲಿ ಓದಿಕೊಂಡ ನಿಯಮ 8(viii)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಡಿ.ಎನ್. ಯಶೋಧಮ್ಮ, ದ್ವಿತೀಯ ದರ್ಜೆ ಭೂಮಾಪಕರು, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ-1, ಕೆ.ಐ.ಎ.ಡಿ.ಬಿ. (ಬಿ.ಎಂ.ಐ.ಸಿ.ಪಿ.) ಗಾಂಧಿನಗರ, ಬೆಂಗಳೂರು ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣ ಜಾರಿಗೆ ಬರುವಂತೆ ವಜಾಗೊಳಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.1470

## ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಧಾರವಾಡ ತಾಲ್ಲೂಕು ವಲಯ, ಧಾರವಾಡ

### ಅಧಿಕೃತ ಜ್ಞಾಪನ

### ಸಂಖ್ಯೆ: ಎ5: ಅನಧಿಕೃತ ಗೈ.ಹಾ:144:03-04/ 656, ದಿನಾಂಕ:8ನೇ ಸೆಪ್ಟೆಂಬರ್, 2006

**ವಿಷಯ:** ಶ್ರೀ ಜೆ.ವೈ. ಕಿತ್ತೂರ, ಸಶಿ ಸಹಿಪ್ರಾಶಾಲೆ ಕೋಟೂರ ಇವರ ಅನಧಿಕೃತ ಗೈರು ಹಾಜರಿ ಪ್ರಯುಕ್ತ ಸೇವೆಯಿಂದ ವಜಾ ಮಾಡಿದ ಬಗ್ಗೆ.

**ಉಲ್ಲೇಖ:** 1) ಮು.ಗು. ಸಕಿಪ್ರಾಶಾಲೆ ಹೊಸವಾಳ ಇವರ ಪತ್ರ ದಿನಾಂಕ:24.11.2003, 02.04.2004.
2) ಈ ಕಛೇರಿಯ ಜ್ಞಾಪನ ಸಮ ಸಂಖ್ಯೆ: ದಿನಾಂಕ:30.03.2004, 26.06.2004, 05.08.2004, 23.08.2004, 08.04.2005, 08.07.2005.
3) ದಿನಾಂಕ:21.08.2004ರ ಸಂಯುಕ್ತ ಕರ್ನಾಟಕ ದಿನಪತ್ರಿಕೆ.
4) ದಿನಾಂಕ:22.08.2004ರ ವಿಜಯ ಕರ್ನಾಟಕ ದಿನಪತ್ರಿಕೆ.
5) ಸದರಿ ಶಿಕ್ಷಕ ಅರ್ಜಿ ದಿನಾಂಕ:23.08.2004.
6) ಸದರಿ ಶಿಕ್ಷಕರ ಛಾಪಾ ಕಾಗದದ ಮೇಲೆ ಮುಚ್ಚಳಿಕೆ ನೀಡಿದ ದಿನಾಂಕ:08.04.2005.
7) ಮು.ಗು. ಸಹಿಪ್ರಾಶಾಲೆ ಕೋಟೂರ ಇವರ ಪತ್ರ ದಿನಾಂಕ:14.06.2005.
8) ಉಪನಿರ್ದೇಶಕರು ಸಾಶಿಇಲಾಖೆ ಧಾರವಾಡ ಇವರ ಪತ್ರ ಸಂಖ್ಯೆ:ಇ2: ಪ್ರಾಶಾಶಿ: ಅಗೈಹಾ: 02: 06-07, ದಿನಾಂಕ:30.08.2006.

**ಪ್ರಸ್ತಾವನೆ:**

ಮೇಲಿನ ವಿಷಯ ಹಾಗೂ ಉಲ್ಲೇಖದ ಪ್ರಕಾರ ಶ್ರೀ ಜೆ.ವೈ. ಕಿತ್ತೂರ, ಸಹಶಿಕ್ಷಕರು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕೋಟೂರ ಇವರು ಈ ತಾಲ್ಲೂಕಿನಲ್ಲಿ ಸಕಿಪ್ರಾಶಾಲೆ ಹೊಸವಾಳ ಈ ಶಾಲೆಯಲ್ಲಿ ನಿಯೋಜನೆ ಮೇಲೆ ಸೇವೆ ಸಲ್ಲಿಸುತ್ತಿದ್ದ ದಿನದಿಂದಲೂ ಈವರೆಗೂ ಶಾಲಾ ಕರ್ತವ್ಯಕ್ಕೆ ಸರಿಯಾಗಿ ಹಾಜರಾಗದೆ ಅಧಿಕಾರಿಗಳಿಂದ ಯಾವುದೇ ರೀತಿಯ ರಜೆಯನ್ನು ಮಂಜೂರಾತಿ ಪಡೆಯದೆ ಪದೇ ಪದೇ ಶಾಲೆಗೆ ಗೈರು ಹಾಜರಾಗುತ್ತಿರುವುದು ಕಂಡುಬರುತ್ತಿದೆ. ಈ ಬಗ್ಗೆ ಉಲ್ಲೇಖ-2ರ ಪ್ರಕಾರ ಕಾಲಕಾಲಕ್ಕೆ ಎಚ್ಚರಿಕೆ ನೋಟೀಸು ನೀಡಿದರೂ ಯಾವುದೇ ಸುಧಾರಣೆ ಕಂಡುಬಂದಿರುವುದಿಲ್ಲ. ವಿನಾಕಾರಣ ಪೂರ್ವಾನುಮತಿ ಪಡೆಯದೆ ವೈದ್ಯಕೀಯ ಆಧಾರದ ಮೇಲೆ ರಜೆ ಅರ್ಜಿ ನೀಡಿ ಗೈರು ಹಾಜರಾಗುತ್ತಿರುವುದು ಕಂಡುಬಂದಿರುತ್ತದೆ. ಈ ಬಗ್ಗೆ ಅಂತಿಮವಾಗಿ ನೋಟೀಸು ನೀಡಿ ಉಲ್ಲೇಖ-3 ರಂತೆ ಪತ್ರಿಕಾ ಪ್ರಕಟಣೆ ಸಹ ಕೊಡಲಾಗಿತ್ತು. ನಂತರ ಸದರಿ ಶಿಕ್ಷಕರು ಇನ್ನೂ ಮುಂದೆ ಈ ಗೈರು ಹಾಜರಾಗದಂತೆ ಎಚ್ಚರಿಕೆಯಿಂದ ಕರ್ತವ್ಯ ನಿರ್ವಹಿಸುವುದಾಗಿ ದಿನಾಂಕ:23.08.2004ರಂದು ಮುಚ್ಚಳಿಕೆ ಪತ್ರ ಬರೆದುಕೊಟ್ಟು ಕರ್ತವ್ಯಕ್ಕೆ ಹಾಜರಾಗಿ ಪುನಃ ಅನಧಿಕೃತ ಗೈರು ಹಾಜರಾಗಿ ಉಳಿದಿರುವುದು ಶಿಕ್ಷಕರ ನಿರ್ಲಕ್ಷತನ ಹಾಗೂ ಕರ್ತವ್ಯ ಚ್ಯುತಿ ಎತ್ತಿ ತೋರಿಸುತ್ತದೆ. ನಂತರ ಪುನಃ ದಿನಾಂಕ:08.04.2005 ರಂದು 100/- ರೂಪಾಯಿ ಛಾಪಾ ಕಾಗದ ಮೇಲೆ ಇನ್ನೂ ಮುಂದೆ ಯಾವುದೇ ಕಾರಣಕ್ಕೂ ಅನಧಿಕೃತ ಗೈರು ಹಾಜರಾಗಿ ಉಳಿಯುವುದಿಲ್ಲಾ ಹಾಗೆ ಗೈರು ಹಾಜರಾದ್ದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ನನಗೆ ಯಾವುದೇ ಸೂಚನೆ ನೀಡದೆ ನನ್ನನ್ನು ಸಿ.ಸಿ.ಎ. ನಿಯಮಗಳನ್ವಯ ಸೇವೆಯಿಂದ ವಜಾ ಅಥವಾ ಕಡ್ಡಾಯ ನಿವೃತ್ತಿಗೊಳಿಸಲು ಯಾವುದೇ ಕ್ರಮ ಕೈಗೊಳ್ಳುವಂತೆ ಕೋರಿ ಅಂತಿಮವಾಗಿ ಅನುಮತಿ ಪಡೆದು ದಿನಾಂಕ:08.04.2005ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ನಂತರ ಪುನಃ ದಿನಾಂಕ:13.06.2005 ರಿಂದ ಈ ವರೆಗೂ ಯಾವುದೇ ಸಕಾರಣಗಳನ್ನು ನೀಡದೆ ಸೇವೆಯಿಂದ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಸದರಿಯವರ ಅನಧಿಕೃತ ಗೈರು ಹಾಜರಿ ವಿವರ ಈ ಕೆಳಗಿನಂತೆ ಇರುತ್ತದೆ.

1) ದಿನಾಂಕ:06.11.2003 ರಿಂದ 14.12.2003ರ ವರೆಗೆ.
2) ದಿನಾಂಕ:01.01.2004 ರಿಂದ 08.04.2004ರ ವರೆಗೆ.
3) ದಿನಾಂಕ:10.04.2004 ರಿಂದ 23.08.2004ರ ವರೆಗೆ.
4) ದಿನಾಂಕ:25.11.2004 ರಿಂದ 07.04.2005ರ ವರೆಗೆ.

5) ದಿನಾಂಕ:13.06.2005 ರಿಂದ 22.06.2005ರ ವರೆಗೆ.

6) ದಿನಾಂಕ:28.06.2005 ರಿಂದ 02.07.2005ರ ವರೆಗೆ.

7) ದಿನಾಂಕ:25.07.2005 ರಿಂದ ಈವರೆಗೂ ಗೈರು ಹಾಜರಿ ಇರುತ್ತಾರೆ.

ಈ ಮುಂದಿನ ದಿನಾಂಕಗಳಿಗೆ ವೈದ್ಯಕೀಯ ಕಾರಣವನ್ನು ನೀಡಿದ್ದು ಸಕ್ಷಮ ಪ್ರಾಧಿಕಾರದಿಂದ ಯಾವುದೇ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸಿರುವುದಿಲ್ಲಾ ಹಾಗೂ ರಜೆ ಮಂಜೂರಾತಿ ನೀಡಿರುವುದಿಲ್ಲ.

ಈ ಮೇಲಿನ ಎಲ್ಲಾ ಪ್ರಕರಣಗಳಿಂದಾಗಿ ಸದರಿಯವರಿಗೆ ಸರಕಾರಿ ಸೇವೆಯಲ್ಲಿ ಮುಂದುವರೆಯಲು ಅವರಿಗೆ ಇಚ್ಛೆ ಹಾಗೂ ಆಸಕ್ತಿ ಇಲ್ಲವೆಂದು ಈ ಮೇಲಿನ ಅಂಶಗಳಿಂದ ತಿಳಿದು ಬರುತ್ತದೆ. ಈ ಶಿಕ್ಷಕರ ಸೇವೆ ನಡತೆ, ಕರ್ತವ್ಯ ಪ್ರಜ್ಞೆ ಮತ್ತು ಒಟ್ಟಾರೆ ಸೇವೆಯನ್ನು ಪರಿಶೀಲಿಸಿದರೆ ಯಾವುದೇ ಗುಣಾತ್ಮಕ ಅಂಶಗಳು ಕಂಡುಬರುವುದಿಲ್ಲಾ ಹಾಗೂ ವಿದ್ಯಾರ್ಥಿಗಳ ಶೈಕ್ಷಣಿಕ ಹಿತ ದೃಷ್ಟಿಯಿಂದ ಸದರಿಯವರ ಸೇವೆ ಮಾರಕವಾಗಿರುವುದರಿಂದ ಶಿಸ್ತು ಕ್ರಮ ಜರುಗಿಸುವುದು ಸೂಕ್ತ ಹಾಗೂ ಸಮಂಜಸವೆಂದು ಕಂಡುಬಂದ ಹಿನ್ನಲೆಯಲ್ಲಿ ಹಾಗೂ ಉಲ್ಲೇಖ-8ರ ಆದೇಶದಂತೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಜೆ.ವೈ. ಕಿತ್ತೂರ, ಸಹಶಿಕ್ಷಕರು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಕೋಟೂರ ತಾಲ್ಲೂಕು, ಧಾರವಾಡ ಇವರು ದಿನಾಂಕ:24.11.2003ರಿಂದಲೂ ಈವರೆಗೂ ಇಲಾಖಾ ಪೂರ್ವಾನುಮತಿ ಪಡೆಯದೆ ಪದೇ ಪದೇ ಕರ್ತವ್ಯಕ್ಕೆ ಗೈರು ಹಾಜರಾಗುತ್ತಿರುವುದು ಕಂಡುಬರುತ್ತಿದ್ದು ಈ ಬಗ್ಗೆ ಸಾಕಷ್ಟು ಬಾರಿ ಎಚ್ಚರಿಕೆ ನೋಟೀಸು ನೀಡಿ ಅವರ ನಡವಳಿಕೆಯನ್ನು ತಿದ್ದುಕೊಳ್ಳಲು ಸಾಕಷ್ಟು ಸಮಯಾವಕಾಶವನ್ನು ಕೊಟ್ಟರೂ ಸದರಿ ಶಿಕ್ಷಕರು ತಮ್ಮ ನಿರ್ಲಕ್ಷತನ ಹಾಗೂ ಇಲಾಖಾ ನಿಯಮಗಳ ಉಲ್ಲಂಘನೆ ಮಾಡಿ ಮಕ್ಕಳ ಶೈಕ್ಷಣಿಕ ಪ್ರಗತಿಗೆ ವ್ಯತಿರಿಕ್ತವಾದ ನಡತೆಯನ್ನು ಮುಂದುವರೆಸಿಕೊಂಡು ಬರುತ್ತಿದ್ದು ಇದರಿಂದ ಸದರಿ ಶಿಕ್ಷಕರು ಸೇವೆಯಲ್ಲಿ ಮುಂದುವರೆಯುವುದರಿಂದ ಶೈಕ್ಷಣಿಕ ಪ್ರಗತಿಗೆ ಮಾರಕವಾಗುತ್ತಿರುವುದರಿಂದ ಸದರಿ ಶಿಕ್ಷಕರನ್ನು 13.06.2005 ದಿನಾಂಕದಿಂದ ಜಾರಿಗೆ ಬರುವಂತೆ ಕರ್ನಾಟಕ ಸರಕಾರಿ ಸೇವಾ ನಿಯಮ 108 ರಂತೆ ಹಾಗೂ ಸಿ.ಸಿ.ಎ. ನಿಯಮ 1957 ನಿಯಮಗಳಡಿಯಲ್ಲಿ ಇವರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ. ಈ ಬಗ್ಗೆ ಮನವಿಗೆ ಹಾಗೂ ಇನ್ನಿತರೆ ಅಪೀಲುಗಳಿಗೆ ಅವಕಾಶ ಇರುವುದಿಲ್ಲ.

**ಎಸ್.ಬಿ. ಕೊಡ್ಲಿ**

ಪಿ.ಆರ್.1471

ಕ್ಷೇತ್ರ ಶಿಕ್ಷಣಾಧಿಕಾರಿಗಳು,

ತಾಲ್ಲೂಕುವಲಯ, ಧಾರವಾಡ.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003-Clarification under Section 59(4) regarding rate of tax applicable on "flour mills" and "emery stones".

**Ref:** Application Dated:22.06.2006 of M/s Sudarshan Industries, Plot No.19/1, Sy.No.323, Maigaon Indl. Area, G.I.T. College Road, Udyambag, Belgaum-590 008.

In his application cited at reference above, the applicant has sought clarification regarding rate of tax applicable on "flour mills" and "emery stones".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clairification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.129/06-07, Dated:23rd September, 2006**

It is hereby clarified that:-

(i) "flour mills" falling under Central Excise Tariff Code 8437 80 10 covered under Sl.No.38 of Notification No.FD 316 CSL 2005 (1), Dated: 05.08.2005 is taxable at 4% under the Karnataka Value Added Tax Act, 2003.

(ii) "emery stones" is taxable at 12.5% under Section 4(1) (b) of the Karnataka Value Added Tax Act, 2003.

**B.A. HARISH GOWDA**

PR-1474

Commissioner of Commercial Taxes,

(Karnataka), Bangalore.